ಪ್ರಚಾರ ಪುಸ್ತಕ ಮಾಲೆ

32

# ಅಕ್ಕಮಹಾದೇವಿ

ಎಸ್. ವಿ. ಪರಮೇಶ್ವರಭಟ್ಟ



ಪ್ರಚಾರ ಪುಸ್ತಕಮಾಲೆ–೩೨

# ಅಕ್ಕಮಹಾದೇವಿ

ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.




೧೯೮೭

ಮೊದಲನೆಯ ಮುದ್ರಣ : ೧೯೪೧
ಎರಡನೆಯ ಮುದ್ರಣ : ೧೯೪೩
ಮೂರನೆಯ ಮುದ್ರಣ : ೧೯೫೬
ನಾಲ್ಕನೆಯ ಮುದ್ರಣ : ೧೯೮೭

೧೦,೦೦೦ ಪ್ರತಿಗಳು



ಬೆಲೆ : ರೂ. ೧-೦೦

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚ ಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಮೂವತ್ತೊಂದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಎಸ್. ವಿ. ಪರಮೇಶ್ವರಭಟ್ಟ ಅವರ 'ಅಕ್ಕಮಹಾದೇವಿ' ಹೆಚ್ಚು ಜನಪ್ರಿಯ ವಾಗಲೆಂದು ನಾನು ಆಶಿಸುತ್ತೇನೆ.

ಎನ್. ಎಸ್. ಸುಬ್ಬರಾವ್
ಕುಲಪತಿಗಳು

# ಅರಿಕೆ

ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಆಶ್ರಯದಲ್ಲಿ ನಾನು ಕೊಟ್ಟ ಎರಡು ಉಪನ್ಯಾಸಗಳ ವಿಸ್ತೃತರೂಪ ಈ ಪುಸ್ತಕ. ಇದು ಹೀಗೆ ವಿಸ್ತೃತಗೊಂಡು ಸಾಕಾರವಾಗಿ ನಿಲ್ಲು ವುದಕ್ಕೆ ಪ್ರಚಾರ ಪುಸ್ತಕಮಾಲೆಯ ಸಂಪಾದಕ ಮಂಡಲಿಯ ಆದರೋತ್ಸಾಹಗಳೂ ಅದರ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾಯರ ಸತತವಾದ ಪ್ರೇರಣೆಯೂ ಕಾರಣ ಗಳು. ಈ ಸಂದರ್ಭದಲ್ಲಿ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಂಪಾದಕರಿಗೂ ಅವರ ಸಹೋದ್ಯೋಗಿಗಳಿಗೂ ಅರ್ಪಿಸುತ್ತೇನೆ.

ಈ ಪುಸ್ತಕವನ್ನು ಬರೆಯುವಾಗ ಅಕ್ಕನ ಚರಿತ್ರೆಗೆ ಸಂಬಂಧಿಸಿದ ಕೆಲವು ವಿವರಗಳನ್ನು ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರು ಈ ವರ್ಷದ ಪ್ರಬುದ್ಧ ಕರ್ಣಾಟಕದ ಸಂಕ್ರಾಂತಿಯ ಸಂಚಿಕೆಗೆ ಬರೆದಿರುವ 'ಮಹಾದೇವಿಯಕ್ಕನ ಕೆಲವು ವಚನಗಳು' ಎಂಬ ಲೇಖನದಿಂದ ತೆಗೆದುಕೊಂಡಿದ್ದೇನೆ. ಹೀಗೆ ಈ ಲೇಖನವನ್ನು ಪ್ರಕಟನೆಗೆ ಮುಂಚೆಯೇ ನನ್ನ ಪುಸ್ತಕಕ್ಕೆ ಬಳಸಿಕೊಳ್ಳಲು ಅನುಮತಿಯನ್ನಿತ್ತುದಕ್ಕಾಗಿ ಶ್ರೀಮಾನ್ ಶ್ರೀಕಂಠಯ್ಯನವರಿಗೂ ಪ್ರಬುದ್ಧ ಕರ್ಣಾಟಕದ ಸಂಪಾದಕರಿಗೂ ನಾನು ಅತ್ಯಂತ ಕೃತಜ್ಞ ನಾಗಿದ್ದೇನೆ.

ಇದನ್ನು ಅತಿ ಶೀಘ್ರವಾಗಿ ಪ್ರತಿಮಾಡಿ ಮುದ್ರಣಕ್ಕೆ ಸಿದ್ಧ ಪಡಿಸಿಕೊಟ್ಟ ನನ್ನ ಮಿತ್ರರಾದ ಶ್ರೀಮಾನ್ ನೊ. ಸಂ. ಶ್ರೀನಿವಾಸ ಅಯ್ಯಂಗಾರ್ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಎಸ್. ವಿ. ಪರಮೇಶ್ವರಭಟ್ಟ

## ವಿಷಯ ಸೂಚಿಕೆ

## ೧. ಪ್ರವೇಶ

'ಲೋಕವೆಂಬ ಮಾಯೆಗೆ ಶರಣಚಾರಿತ್ರ ಮರುಳಾಗಿ ತೋರುವುದು' ಎಂದು ಅಕ್ಕ ಒಮ್ಮೆ ಮಾರ್ಮಿಕವಾಗಿ ನುಡಿದಿದ್ದಾಳೆ. ನಿಜ. ಲೋಕ ಎನ್ನುವುದು ಬಹುಭಾಗ ಮಾಯೆಯಿಂದ ಕೂಡಿದೆ. ಇಂತಹ ಮಾಯೆಯು ಪರೆಯಿಂದ ಕೂಡಿದ ಕಣ್ಣಿನ ನೋಟಕ್ಕೆ ಮಾಯೆ ಹರಿದ ಶರಣರ ಚರಿತ್ರೆ ಮರುಳೆಂಬಂತೆ ಕಾಣುವುದು. ಆದರೆ ಮಾಯೆಯ ಪರೆಬಿಟ್ಟ ಕಣ್ಣಿನಲ್ಲಿ ನೋಟ ನಿಚ್ಚಳವಾಗಿ ನೋಡುವ ಒಬ್ಬಿಬ್ಬರಿಗಾದರೂ ಈ ಶರಣ ಜೀವನ ಮರುಳಾಗಿ ಕಾಣಲಾರದು. ಅದರಲ್ಲೂ ಅಕ್ಕನಂತಹ ಶ್ರೇಷ್ಠ ಅನುಭಾವಿಯ ಆಧ್ಯಾತ್ಮಿಕ ಜೀವನ ಆ ನಿಲುವಿನಲ್ಲಿಯೇ ನಿಂತು ನೋಡುವ ಜನಕ್ಕೆ ಮರುಳೆಂದರೆ ಒಪ್ಪುವ ಮಾತಾಗದು.

"ಮನವೆಂಬ ಸಖಿಯ ಪ್ರಸಾದದಿಂದ ಅನುಭಾವವ ಕಲಿತೆನು ಶಿವನೊಡನೆ" ಎನ್ನುವುದು ಅಕ್ಕನ ಒಂದು ಮಾತು. ಇಂತಹ ಮಾತು ಇನ್ನೂ ಹಲವಿವೆ. ಈ ಮಾತಿನಲ್ಲಿಯೂ ಇತರ ಇಂತಹ ಮಾತುಗಳಲ್ಲಿಯೂ ತೋರಿ ಬರುವ ಅಕ್ಕನ ಶಿವಾನುಭವ, ಅದಕ್ಕೆ ಪೂರ್ವಭಾವಿಯಾಗಿ ಬಂದ ಮಧುರಭಾವ, ಇವು ಬೆಳೆದು ನಿಲ್ಲಲು ಊರೆಯಾಗಿ ನಿಂತ ಆಕೆಯ ಆತ್ಮಾನುಸಂಧಾನ, ದಿವ್ಯೋನ್ಮಾದ, ಚಿತ್ತಾಹ್ಲಾದ ಇವೆಲ್ಲವುಗಳ ಪರಿಚಯವನ್ನೂ ಸೂಕ್ಷ್ಮವಾಗಿಯಾದರೂ ನಾವು ಗ್ರಹಿಸಬಹುದು ಗ್ರಹಿಸಲು ಈ ಸೂಕ್ಷ್ಮದೃಷ್ಟಿ ಮಾತ್ರ ಆವಶ್ಯಕ. ಹೀಗೆ ಅಕ್ಕನ ಮಾತು ಹೇಳಿದ ವಿಷಯಗಳಿಗಿಂತ ಹೇಳದ ಅವೆಷ್ಟೋ ಸಂಗತಿಗಳನ್ನು ನಮ್ಮ ಸೂಕ್ಷ್ಮದೃಷ್ಟಿಗೆ ತೆರೆದು ತೋರಿಸುತ್ತದೆ ಎಂದಮೇಲೆ ಇಂತಹ ದಿವ್ಯ ಅನುಭಾವಿಗಳ ಜೀವನವನ್ನು ಅವರ ವಚನಗಳಿಂದಲೇ ಚಿತ್ರಿಸುವುದು ಒಂದು ಮಧುರಯಾತನೆ.

ಒಂದು ರೀತಿ ನೋಡಿದರೆ ಅಕ್ಕನ ಜೀವನಚರಿತ್ರೆಗೇನೂ ಕಷ್ಟವಿಲ್ಲ. ಪುರಾಣ, ದಂತಕಥೆ, ಪವಾಡ ಇವುಗಳಿಂದಲೂ, ಜೊತೆಗೆ ಚರಿತ್ರೆ, ವ್ಯಕ್ತಿಪರಿಚಯ, ಕೃತಿಪರಿಚಯ–ಇವುಗಳಿಂದಲೂ ಅವಳ ಜೀವನವನ್ನು ಸಾಧಾರವಲ್ಲದಿದ್ದರೂ ಸಾಕಾರವಾಗಿ ಯಾದರೂ ಬರೆಯುವುದು ಸಾಧ್ಯ. ಕೈಲಾಸದಲ್ಲಿ ಕುಪಿತ ಳಾದ ಪಾರ್ವತಿಯಿಂದ ಶಾಪಗ್ರಸ್ತಳಾದ ರುದ್ರಕನ್ನಿಕೆಯೊಬ್ಬಳು ಭೂಲೋಕದಲ್ಲಿ ಮಾನವಳಾಗಿ ಜನ್ಮವೆತ್ತುವಳು. ಈಕೆ ಯೌವನಾ ವಸ್ಥೆಗೆ ಬಂದಾಗ ತಾನು ಹುಟ್ಟಿದ ಊರಿನ ಆಳರಸನಾದ ಜೈನ(?) ದೊರೆಯೊಬ್ಬನ ದೃಷ್ಟಿಪಥಕ್ಕೆ ಬೀಳುವಳು. ಪರಿಣಾಮವಾಗಿ ತನಗಿಷ್ಟವಿಲ್ಲದಿದ್ದರೂ ತನ್ನ ವೃದ್ಧ ಮಾತಾಪಿತೃಗಳನ್ನು ಧರ್ಮ ಸಂಕಟಕ್ಕೆ ಸಿಕ್ಕಿಸಲು ಇಚ್ಛಿಸದೆ ಆ ಅರಸನನ್ನು ಮದುವೆ ಯಾಗಲು ಒಪ್ಪುವಳು. ಆದರೆ ಆ ಸಂಸಾರದ ತೊಡರು ಬಹು ಬೇಗ ಬಿಡುಗಡೆಯಾಗಿ ಅಕ್ಕ ಮತ್ತೊಮ್ಮೆ ತಾನು ಎಳವೆ ಯಿಂದಲೂ ಬೆಳಸಿಕೊಂಡು ಬಂದ ಶಿವೋಪಾಸನೆಗೆ ತನ್ನ ಬದು ಕನ್ನು ಮೀಸಲಾಗಿ ಇಡುವಳು. ತನ್ನ ಹೃದಯೇಶ್ವರನೂ ಆರಾಧ್ಯ ದೇವನೂ ಆದ ಚೆನ್ನಮಲ್ಲಿಕಾರ್ಜುನನನ್ನು ಶರಣುಹೋಗಿ ಅವನ ಸಾಕ್ಷಾತ್ಕಾರವನ್ನೇ ಬಯಸಿ ಆ ನಿಮಿತ್ತ ಊರೂರು ತಿರುಗಿ ಬಸವ, ಅಲ್ಲಮ ಮೊದಲಾದ ಶಿವಶರಣರಿರುವ ಕಲ್ಯಾಣಕ್ಕೆ ಹೋಗಿ ಅಲ್ಲಿ ಕೆಲಕಾಲವಿದ್ದು ಭಕ್ತಿಪಂಥದ ದಾರಿಯಲ್ಲಿ, ಮೊದಲಿಟ್ಟ ದಟ್ಟಡಿಗಳನ್ನು ತಿದ್ದಿ ನಡೆದು, ಆ ಬಳಿಕ ತನ್ನ ಇಷ್ಟದೈವವಾದ ಮಲ್ಲಿಕಾರ್ಜುನನನ್ನು ಏಕಾಂತದಲ್ಲಿ ಸಾಧಿಸಲು ಶ್ರೀ ಶೈಲಕ್ಕೆ ಬಂದು ಅಲ್ಲಿ ಬಯಲಾಗುವಳು.

ಅಸಲಿನಲ್ಲಿ ಅಕ್ಕನ ಜೀವನ ಕಥೆ ಇಷ್ಟು ಮಾತ್ರ. ಅಸಲಿಗೆ ಇಷ್ಟಿರುವ ಅಕ್ಕನ ಈ ಕಥೆ ಹಿಂದಿನ ಕವಿಗಳಾದ ಹರಿಹರ

ಚಾಮರಸ ಸಿದ್ಧವೀರಣಾಚಾರ್ಯ ಚನ್ನಬಸವಾಂಕ ಮೊದಲಾದ ಕವಿಗಳ ಕೃತಿಗಳಲ್ಲಿ ಅವರವರ ರಾಗ ಸಂಸ್ಕಾರಗಳಿಗೆ ಅನುಗುಣವಾಗಿ ಬೆಳೆದು ಬಂದಿದೆ. ಎಂದಮೇಲೆ ಅಕ್ಕನ ರುದ್ರರಮಣೀಯವಾದ ಜೀವನದ ಅನುಭಾವವನ್ನು ತಿಳಿಯುವುದಕ್ಕೂ ಮಧುರಭಾವದ ಲಿಂಗಾಂಗ ಸಾಮರಸ್ಯದ ಮಹಿಮೆಯನ್ನು ಅರಿಯುವುದಕ್ಕೂ ಅಕ್ಕನವರು ತಮ್ಮ ಹೃದಯದ ಭಾವನೆಗಳನ್ನು ತೋಡಿಕೊಂಡಿರುವರೆಂಬಂತೆ ಅವರು ಆಡಿಕೊಂಡ ವಚನಗಳ ಜೊತೆಗೆ, ಆ ವಚನಗಳಿಂದಲೇ ಜೀವನಕಥೆಯನ್ನು ಊಹಿಸಲು ಅಸಾಧ್ಯವಾದ ಕಡೆಗಳಲ್ಲಿ ಮಾತ್ರ ಹರಿಹರಾದಿ ಕವಿಗಳ ಕೃತಿಗಳನ್ನು ಲಕ್ಷ್ಯದಲ್ಲಿರಿಸಿಕೊಂಡರೆ ಸಾಕು. ಆದರಲ್ಲೂ ಈ ಕವಿಗಳಲ್ಲೆಲ್ಲಾ ಹರಿಹರನೇ ಕೇವಲ ಪ್ರಾಚೀನನಾದುದರಿಂದ ಅವನ ಕೃತಿಗೆ ಹೆಚ್ಚಿನ ಬೆಲೆಯನ್ನು ಕೊಟ್ಟು ಅಕ್ಕನ ಜೀವನ ಕಥೆಯನ್ನು ನೋಡುವುದು ಉಚಿತವೂ ಸೂಕ್ತವೂ ಆಗಿದೆ.

# ೨. ಅಕ್ಕನವರ ಆಧ್ಯಾತ್ಮಿಕ ಜೀವನ

೧

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ
ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ
ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ
ಚನ್ನಮಲ್ಲಿಕಾರ್ಜುನ ನೀನೊಡ್ಡಿದ ಮಾಯೆಯಿನಾರೂ ಗೆಲಲಾರರು.

ಅಕ್ಕನ ತಾಯಿ ತಂದೆಗಳು ಸುಮತಿ ನಿರ್ಮಲರೆಂದು ಚಾಮರಸನು ಹೇಳಿದ್ದಾನೆ. ಹರಿಹರನು ಹೇಳಿರುವಂತೆ ಅವರು ಶಿವಭಕ್ತ ಶಿವಭಕ್ತೆಯರೆಂದೂ ಇಟ್ಟುಕೊಳ್ಳಬಹುದು. ಆ ಶೈವ ದಂಪತಿಗಳಿಗೆ ಅವರ ಅವಿರಳವಾದ ಶಿವೋಪಾಸನೆಯ ಫಲವಾಗಿ ಅಕ್ಕನು ಜನಿಸಿದಳು. ಮೊದಲೇ ಮುಗ್ಧ ಶಿಶು, ಮೇಲಾಗಿ ಹೆಣ್ಣು, ಅದರಲ್ಲೂ ಶಿವಭಕ್ತೆ; ಎಂದ ಮೇಲೆ ಇವಳ ರೂಪ ಗುಣ ಸೌಂದರ್ಯಗಳನ್ನು ಬೇರೆ ಹೇಳಬೇಕಾದುದಿಲ್ಲ. ದಿವಸ ಕಳೆದಂತೆ ಹುಡುಗಿ ಬೆಳೆದು ಯೌವನಸ್ಥಳಾದಳು. ಆಗ ಸಹಜವಾಗಿ ತಾಯಿ ತಂದೆಗಳಿಗೆ ಯೋಚನೆಯಾಯಿತು. ಈ ಯೋಚನೆ ಹೆಣ್ಣು ಹಡೆದ ಎಲ್ಲ ತಂದೆ ತಾಯಿಗಳಿಗೂ ಬರಬಹುದಾದ ಯೋಚನೆ. ಬೆಳೆಯುತ್ತಿರುವ ಮಗಳನ್ನು ನೋಡಿ, "ಇದಾವ ಕಾಮುಕರಂ ಕೀಳ್ ಮಾಡಲಿರ್ದಪುದು, ಇದಾವ ರಸಿಕರ ಭಾವಮಂ ಬರಿಕೈಯ್ಯಲಿರ್ದಪುದು, ಇದಾವ ಸಜ್ಜನರಂ ನೀತಿಗೆಡಿಸಲಿರ್ದಪುದು" ಎಂದು ಚಿಂತಿಸಿದರು. ಈ ಚಿಂತೆ ಹುಡುಗಿಯ ಬೆಳವಣಿಗೆಯ ಜೊತೆಗೆ ತಾನೂ ಬೆಳೆಯತೊಡಗಿತು. ನಿರ್ಮಲಸುಮತಿಯರು ಅಕ್ಕನನ್ನು ಮೋಹದಿಂದ ಅದಕ್ಕೂ ಹೆಚ್ಚಾದ ಭಯದಿಂದ, "ಗಗನಾಂಗನೆ

ಶರತ್ಕಾಲದ ಮುಗಿಲ ಮರೆಯೊಳು ಚಂದ್ರಕಳೆಯುಂ ಸಲಹುವಂತೆ" ವಿಶೇಷ ರೀತಿಯು ಪ್ರೇಮೋತ್ಸಾಹಗಳಿಂದ ಸಲಹುತ್ತಿದ್ದರು.

ಅಕ್ಕನು ಹುಟ್ಟಿದ ಉಡಂತಡಿ ಎನ್ನುವ ಊರನ್ನು 'ಕೌಶಿಕ' ಎಂಬ ದೊರೆ ಆಳುತ್ತಿದ್ದನು. ಈತನು ವೀರಶೈವನಲ್ಲವೆಂದು ಎಲ್ಲ ಕವಿಗಳೂ ಹೇಳಿದ್ದಾರೆ. ಆದುದರಿಂದ ಅಕ್ಕನೇ ಮೊದಲಾದ ಶಿವಶರಣರ ದೃಷ್ಟಿಯಲ್ಲಿ ಈತ 'ಭವಿ'. ಈ ಭವಿಯಾದ ಕೌಶಿಕನ ಸಹವಾಸದಿಂದಲೇ ಅಕ್ಕನು ಈ ಲೋಕದಲ್ಲಿ ಸಂಸಾರದ ಕೆಸರು ತುಳಿದಳು ಎಂದೂ, ತುಳಿದರೂ ಮಿಕ್ಕವರಂತೆ ಅಲ್ಲಿಯೇ ಇರದೆ ಕಾಲು ತೊಳೆದು ಹೊರಗೆ ಬಂದಳು ಎಂದೂ, ಅದೇ ವೈರಾಗ್ಯಕ್ಕೆ ಕಾರಣವಾಗಿ ಮೊದಲಿನ ಶಿವಭಕ್ತಿ ಕುಡಿವರಿದು ದಾಂಗುಡಿಯಿಟ್ಟು ಹಬ್ಬಿತೆಂದೂ ಹೇಳುತ್ತಾರೆ. ಇದರ ವಿವರ ಹೀಗೆ: ಒಂದು ದಿವಸ ಕೌಶಿಕ ಮಹಾರಾಜನು ಊರ ಹೊರಗಿನ ಕಾಡಿಗೆ ಬೇಟೆಗೆಂದು ಹೋಗಿದ್ದವನು ದಿನದ ಇಳಿಹೊತ್ತಿನಲ್ಲಿ ಬೇಟೆಯಿಂದ ಮರಳುತ್ತಿದ್ದನು. ಆಗ ವಿಶೇಷ ರೀತಿಯ ವೈಭವ ದಿಂದ ರಾಜಬೀದಿಯಲ್ಲಿ ಮೆರವಣಿಗೆ ಹೋಗುತ್ತಿದ್ದಾಗ ಅದನ್ನು ನೋಡಲೆಂದು ಬಹುಮಂದಿ ಕುತೂಹಲಾವಿಷ್ಟರಾಗಿ ನಿಂತು ನೋಡುತ್ತಿದ್ದರು. ಇದು ಸ್ವಾಭಾವಿಕವೇ. ಹೀಗೆ ಸಹಜವಾಗಿ ಮೆರವಣಿಗೆಯನ್ನು ಕೇವಲ ಬಾಲ್ಯ ಭಾವದ ಚಾಪಲ್ಯದಲ್ಲಿ ನೋಡು ತ್ತಿದ್ದವರಲ್ಲಿ ಅಕ್ಕನೂ ಒಬ್ಬಳು. ಮೆರವಣಿಗೆಯನ್ನು ನೋಡು ತ್ತಿದ್ದ ಅವಳ ಕಣ್ಣು ಮೆರವಣಿಗೆಯ ಕೇಂದ್ರ ವ್ಯಕ್ತಿಯಾದ ಅರಸನನ್ನು ಕಂಡಿತು. ಅರಸನು ಕೂಡ ನೆರದ ಜನಗಳನ್ನು ನೋಡುತ್ತಿರುವಲ್ಲಿ ಆಕಸ್ಮಿಕವಾಗಿ ಅಕ್ಕನನ್ನು ನೋಡಿದನು. ನೋಡಿದೊಡನೆ ಆ ನೋಟ ಅವಳಲ್ಲೆ ನಾಟಿತು. ಅವಳಲ್ಲಿಟ್ಟ ನೋಟವನ್ನು ಕೀಳಲಾರದೇ ಕಿತ್ತು ಅರಸನು ಅರಮನೆಗೆ ನಡೆ

ದನು. ಅರಸನ ಹೃದಯದಲ್ಲಿ ಅಕ್ಕನನ್ನು ವರಿಸುವ ಆಲೋಚನೆ ಮನೆಮಾಡಿತು. ಅಕ್ಕನಿಗಾದರೋ ಈ ವ್ಯಾಪಾರದ ಅರ್ಥ ಕೂಡ ಆಗದೆ ಅವಳು ತನ್ನ ವಯಸ್ಸಿಗೆ ಸಹಜವಾದ ಮುಗ್ಧತನ ವನ್ನು ಮೆರೆದು ಮನೆಗೆ ತೆರಳಿದಳು. ಅರಸನು ಸಂಧಾನಕ್ಕೆ ಪ್ರಾರಂಭಿಸಿದನು. ದೂತರಿಂದ ಮಂತ್ರಿಗಳವರೆಗೆ ಒಬ್ಬರ ಮೇಲೊಬ್ಬರನ್ನು ಅಕ್ಕನ ಮನೆಗೆ ಕಳುಹಿಸಿ ನಯ ಭಯಗಳನ್ನು ತೋರಿಸಿ ಅಕ್ಕನನ್ನು ಎಂತಾದರೂ ಮದುವೆಯಾಗಲು ನಿಶ್ಚಯಿಸಿ ದನು.

"ತುಳುಕದ ಪೂರ್ಣಸುಖದಂತೆ, ಮಿಸಲಳಿಯದ ಮನೋರಥದಂತೆ, ಮೂಡಿದ ಭಕ್ತಿಯಂತೆ, ಕೂಡಿದ ಪೂಜೆಯಂತೆ"

ಇಲ್ಲಿಯವರೆಗೆ ಹಾಯಾಗಿ ತಂದೆತಾಯಿಗಳ ಎದುರಿನಲ್ಲಿ ತಾನಾ ಯಿತು ತನ್ನ ಶಿವಾನುಭವವಾಯಿತು ಎಂದು ಮಿಕ್ಕವರ ಗೊಡವೆಗೆ ಹೋಗದೆ ಸುಖವಾಗಿದ್ದ ಅಕ್ಕನಿಗೆ ಆ ಎಳವೆಯ ಸುಖವನ್ನು ನುಂಗಿ ನೊಣೆಯುವ ಈ ವಿಶೇಷ ತೊಂದರೆ ಪ್ರಾಪ್ತವಾಯಿತು. "ಏನೆಂದೊಡು ಭವಿಯನೊಲ್ಲೆನೀ ಮಾತೇಕೆ" ಎಂದು ಅಕ್ಕ ಹೇಳ ಬಹುದಿತ್ತು : ಆದರೆ, "ಕೂಸು ಕೊಡದಿರ್ದೊಡೀಗಳ್ ಕೊಲಲ್ ಬೆಸಸಿದು" ಎಂಬ ಮಂತ್ರಿಗಳ ಹೆದರಿಕೆ ಅವಳನ್ನು ನಡುಗಿಸಿತು.

ಎಲೆ ಮಗಳೆ ಮಗಳೆ ನಿನ್ನಯ ದೂಸರಿಂದೆಮಗೆ
ನೆಲಸಿತ್ತು ದುರ್ಮರಣವೇನೆಂಬೆ ವೃದ್ಧರಿಗೆ
ಹೊಸತು ನಿನ್ನಯ ಭಕ್ತಿತಾನೆಮಗೆ ಸಂಕಟಂ
ವಸುಧೆಯೊಳು ಭವಿಯೊಳಗೆ ಬಾಳರೇನುತ್ಕಟಂ
ಕಾರಿಕಾಲಮ್ಮೆ ತಾಂ ಭವಿಯೊಡನೆ ಬಾಳಳೇ
ಹೇರೂರ ಹೆಂಗೂಸು ಭವಿಗೆ ಸತಿಯಾಗಳೇ
ಎಲೆಲೆ ವೈಜಕ್ಕವ್ವೆ ಭವಿಗೆ ಪುದುವೋಗಳೇ
ಎಲೆಲೆ ಮಾಂಗಾಯಕ್ಕ ಪಾಂಡ್ಯನೊಡಗೂಡಳೇ

ಎಂದು ತಂದೆ ತಾಯಿಗಳು ಕಾರಿಕಾಲಮ್ಮ, ಹೇರೂರ ಹೆಂಗೂಸು, ವೈಜಕ್ಕ, ಮಾಂಗಾಯಕ್ಕ ಮುಂತಾದವರ ಕಥೆಗಳನ್ನು ಉದಾಹರಿಸಿ,

"ಏಕೆಮ್ಮನೀ ವಿಧಿಗೆ ತಂದಪ್ಪೆ ಬೇಡವ್ವ, ಲೌಕಿಕದೆ ಕೌಶಿಕನ ಸಂಗಮಂ ಮಾಡವ್ವ" ಎಂದು ಬಹುರೀತಿಯಲ್ಲಿ ಹೇಳಿದರೆಂದು ತೋರುತ್ತದೆ. ಆಗ ಅಕ್ಕನ ಮನಸ್ಸು ಎಂತಹ ವಿಷಮಪರಿಸ್ಥಿತಿಗೆ ಒಳಗಾಗಿರಬೇಡ! ತನ್ನ ಹೃದಯಮಂದಿರದಲ್ಲಿ ಆರಾಧ್ಯ ಮೂರುತಿ ಚನ್ನಮಲ್ಲಿಕಾರ್ಜುನನನ್ನು ಬಿಟ್ಟು ಕೌಶಿಕನನ್ನು ವರಿಸುವುದೆ?

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದೆ, ಚೆಲುವಂಗಾನೊಲಿದೆನವ್ವಾ.
ಎಡೆ ಇಲ್ಲದ, ಕಡೆ ಇಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗಾನೊಲಿದೆ.
ಎಲೆ ಅವ್ವಾ; ನೀನು ಕೇಳಾ ತಾಯೆ !
ಭವವಿಲ್ಲದ, ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು.
ಕುಲ ಸೀಮೆ ಇಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ.
ಇದು ಕಾರಣ ಚನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ.
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು."

" ಮನ ಮನ ತಾರ್ಕಣೆಯು ಕಂಡು ಅನುಭವಿಸಲು
ನೆನಹೇ ಘನವಹುದಲ್ಲದೆ ಅದು ಹವಣಲ್ಲಿ ನಿಲ್ಲುವುದೆ?
ಎಲೆ ಅವ್ವ ! ನೀನು ಮರುಳವ್ವೆ !
ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯಗೊಲಿದು ಸಲೆಮಾರುವೋದೆನು.
ನಿನ್ನ ತಾಯಿತನವನೊಲ್ಲೆ ಹೋಗೇ."

ತಾಯಿತನವನ್ನಾದರೂ ಅಕ್ಕನು ಒಲ್ಲೆನೆಂದು ಹೇಳಿಯಾಳು, ಆದರೆ ಭವಿಯ ಸಂಗವನ್ನು ಮಾತ್ರ ಒಲಿವೆನೆನ್ನದು ಅವಳ ನಾಲಗೆ. ಮೇಲೆ ಹೇಳಿರುವ ಈ ವಚನದಲ್ಲಿ ಅವಳು ಎಷ್ಟು ಸರಳವಾಗಿ, ಸುಂದರವಾಗಿ ತನ್ನ ನಲ್ಲ ಮಲ್ಲಿಕಾರ್ಜುನನನ್ನು ಭಕ್ತಿಯಿಂದ ಸಿಂಗರಿಸಿ ಹಾಡಿದ್ದಾಳೆ ಎಂಬುದು ವ್ಯಕ್ತವಾಗುತ್ತದೆ. ಆಕೆ ಶಿವನಲ್ಲಿಟ್ಟಿರುವ ಈ ಪ್ರೇಮಕ್ಕೆ ಈಗ ಬಂದೊದಗಿದ ಈ ವಿಘ್ನ

ವನ್ನು ತಡೆಗಟ್ಟಲು ಮುಂದೆ ತಾನು ಯತ್ನಿಸಿದ ರೀತಿಯಾದರೂ ಶಿವಶರಣೆಗೆ ತಕ್ಕುದಾದ ರೀತಿ. ಮುದುಕರಾದ ತಂದೆತಾಯಿ ಗಳನ್ನು ಆ ವಯಸ್ಸಿನಲ್ಲಿ ತನ್ನ ನಿಮಿತ್ತವಾಗಿ ದುಷ್ಟ ದೊರೆ ಯೊಬ್ಬನು ದಂಡಿಸುವುದು ಅಯುಕ್ತ ಎಂದು ಅಕ್ಕ ವಿಚಾರ ಮಾಡಿ ತಾನು ಮದುವೆಗೊಪ್ಪಿ ಮದುವೆಯಾಗಲಿರುವ ದೊರೆ ಯನ್ನು ಶಿವಭಕ್ತನನ್ನಾಗಿ ಪರಿವರ್ತಿಸಿ ತನ್ನ ಆಧ್ಯಾತ್ಮಿಕ ವಿಚಾರ ಗಳನ್ನು ಅವನಲ್ಲಿ ಬಿತ್ತುವುದಾದರೆ ತನ್ನ ನಿರ್ಮಲ ಚಾರಿತ್ರ್ಯಕ್ಕೆ ಕಳಂಕವೆಲ್ಲಿಯದು ಎಂದು ಬಗೆದಳು.

ಹೀಗೆ ಬಗೆದು ಕೌಶಿಕನು ಕಳುಹಿದ ಮಂತ್ರಿಗಳನ್ನು ಕುರಿತು "ನೀವೆಂದುದಂ ಮಾಳ್ಪೆನಂತದಕ್ಕೆರಡಿಲ್ಲ, ನೀವೆನ್ನ ಮನದೊಳಿ ದ್ದಂತೆ ಮಾಡುವುದೆಲ್ಲ" ಎಂದು ತನ್ನ ಮನಸ್ಸನ್ನು ಬಿಚ್ಚಿ ಹೇಳಿ ದಳು. "ಕೌಶಿಕನನ್ನು ಮದುವೆಯಾಗಲು ಅಡ್ಡಿ ಇಲ್ಲ; ಆದರೆ ಮದುವೆಯಾದಮೇಲೂ ನಾನು ಶಿವಪೂಜೆಯನ್ನೂ ಗುರು ಲಿಂಗ ಜಂಗಮರ ಪೂಜೆಯನ್ನೂ ಮಾಡುತ್ತಿರುವೆನು. ಶಿವಶರಣರ ಕಥೆ ಗಳನ್ನೂ ಶೈವಾಗಮ ಪುರಾಣಗಳ ತತ್ವೋಪದೇಶಗಳನ್ನೂ ಕೇಳು ತ್ತಿರುವೆನು. ನಿಮ್ಮ ದೊರೆ ಕೌಶಿಕನು ಈ ವಿಧವಾದ ನನ್ನ ಶಿವಾಚಾರಗಳಿಗೆ ವಿಘ್ನ ತರುವುದಾದರೆ ನಾನು ಅದನ್ನು ತಪ್ಪು ಎಂದು ಭಾವಿಸುವೆನು. ಇಂತಹ ಮೂರು ತಪ್ಪುಗಳನ್ನು ಕೌಶಿಕನು ಮಾಡಿದ್ದೇ ಆದರೆ ನಾನು ಅವನನ್ನು ತ್ಯಜಿಸಿ ಹೊರಟು ಹೋಗುವೆನು" ಎಂದು ಅಕ್ಕ ಮಂತ್ರಿಗಳಿಗೆ ತನ್ನ ಮತವನ್ನು ವಿವರಿಸಿ ಅವರಿಂದ ಆ ಬಗ್ಗೆ ಓಲೆಯೊಂದನ್ನು ಬರೆಯಿಸಿಕೊಂಡು ಕಳುಹಿಸಿಕೊಟ್ಟಳು. ಮದುವೆಯ ಸಂಧಾನಕ್ಕೆಂದು ಬಂದಿದ್ದ ಅರಸುಮಂತ್ರಿಗಳೊಡನೆ ಅಕ್ಕನು ನಡೆಸಿದ ಮಾತುಕಥೆಗಳಲ್ಲಿ ತೋರಿಬರುವ ಅವಳ ಜಾಣ್ಮೆ ಬಹು ಹಿರಿದು. ತನ್ನ ನಿಬಂಧನೆ

ಗಳನ್ನು ನೋಡಿ ಕೌಶಿಕನು ತನ್ನನ್ನು ಮದುವೆಯಾಗುವ ಪ್ರಸಂಗ ವನ್ನೇ ದೂರಮಾಡುವನು ಎಂದು ಅಕ್ಕ ಭಾವಿಸಿರಬಹುದು ಅಥವಾ ತನ್ನ ನಿಬಂಧನೆಗಳನ್ನು ಅನುಮೋದಿಸಿ ಅರಸು ಮದುವೆ ಯಾಗಲೊಪ್ಪಿದರೂ ಮುಂದೆ ಆತನು ತಾನಾಗಿಯೇ ಶೈವನಾಗಿ ಪರಿವರ್ತಿತನಾಗುವನೆಂದು ಅಕ್ಕ ಭಾವಿಸಿರಬಹುದು. ಹೇಗಾ ದರೂ ಈಗ ಬಂದೊದಗಿದ ಕುತ್ತಿನಿಂದ ತಾನೂ ತನ್ನ ತಂದೆ ತಾಯಿಗಳೂ ಪಾರಾಗಬೇಕು ಎಂದೂ ಊರಿಗೆಲ್ಲಾ ದೊರೆಯಾದ "ಅತಿ ವಿಷಯಿಯೂ ಅತಿ ಕೋಪಿಯೂ ನಿಷ್ಠುರನೂ" ಆದ ಕೌಶಿಕನೂ ಸುಪ್ರಸನ್ನನಾಗಬೇಕು ಎಂದೂ ಅಕ್ಕ ಈ ಹಂಚಿಕೆ ಯನ್ನು ಹೂಡಿದಳು.

ಇತ್ತ ಮಂತ್ರಿಗಳು ಬಂದು ಕೌಶಿಕನಿಗೆ ಅಕ್ಕನೊಡನೆ ತಾವು ನಡೆಸಿಕೊಂಡು ಬಂದ ಮದುವೆಯ ಮಾತುಕಥೆಗಳನ್ನು ವಿವರವಾಗಿ ತಿಳಿಸಿದರು. ಕೌಶಿಕನಿಗೆ ಎಲ್ಲಿ ಇಲ್ಲದ ಸಂತೋಷವಾಯಿತು. ಆತ ಅಕ್ಕನನ್ನು ಮದುವೆಯಾಗುವ ಸಂಭ್ರಮದಲ್ಲಿ ಆಕೆ ಹೇಳಿ ಕಳುಹಿಸಿದ್ದ ನಿಬಂಧನೆಗಳನ್ನು ಅಷ್ಟಾಗಿ ಗಮನಿಸದೆ ತೋರಿಕೆಗೆ ಅವುಗಳನ್ನು ಒಪ್ಪಿದವನಾಗಿ ಮದುವೆಗೆ ಅಣಿಯಾದನು. ಇದರ ಪರಿಣಾಮವಾಗಿ ಅಕ್ಕ ಕೌಶಿಕನನ್ನು ಮದುವೆಯಾಗಿ ಅವನ ಅರ ಮನೆಯನ್ನು ಸೇರಿದಳು. ತನ್ನ ಹಂಚಿಕೆ ತನ್ನನ್ನೇ ಸುತ್ತಿಕೆಡಹಿ ದಂತೆ ಕೌಶಿಕನ ಬಲೆಗೊಳಗಾದಳು.

ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯಮಾಡಿ
ತನ್ನ ನೂಲು ತನ್ನ ಸುತ್ತಿ ಸಾವ ತೆರವಂತೆ
ಮನ ಬಂದುದ ಬಯಸಿ ಬೇವುತ್ತಿದ್ದೇನೆ. ಅಯ್ಯ !
ಎನ್ನ ಮನದ ನಿರಾಶೆಯ ನಿವಾರಿಸಿ ನಿಮ್ಮತ್ತ ತೋರಾ
ಚನ್ನಮಲ್ಲಿಕಾರ್ಜುನಾ

ಎಂದು ಒಳಗೊಳಗೆ ಶಿವನಲ್ಲಿ ಮೊರೆಯಿಡುತ್ತ ಅಕ್ಕ ಸಂಸಾರದಲ್ಲಿ ಕಾಲಿಟ್ಟಳು.

೨

"ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯ ! ಏವೆನೇವೆನಯ್ಯ
ಅಂದಂದಿನ ದುಂದುಗಕ್ಕೆ ಏವೆನೇವೆನಯ್ಯ
ಬೆಂದ ಒಡಲ ಹೊರೆವುದಕ್ಕೆ ನಾನಾರೆ.
ಚನ್ನಮಲ್ಲಿಕಾರ್ಜುನಯ್ಯ ಕೊಲ್ಲು ಕಾಯಿ ನಿಮ್ಮ ಧರ್ಮ."

ಇಲ್ಲಿಂದ ಮುಂದೆ ಅಕ್ಕನ ಜೀವನದಲ್ಲಿ ಎರಡನೆಯ ಘಟ್ಟ ಪ್ರಾರಂಭವಾಗುತ್ತದೆ. ಏನೂ ಅರಿಯದ ಸ್ವಭಾವದ ಸರಳೆಯಾದ ಅಕ್ಕ ಕುಟಿಲೋಪಾಯಗಳಲ್ಲಿ ಚತುರನಾದ ಕಾಮುಕ ಕೌಶಿಕನ ಸಂಸಾರದ ಆವಿಗೆಯಲ್ಲಿ ಬಿದ್ದು ಬೇಯುವುದು ಇಲ್ಲಿನ ಕಥೆ. ಆಕೆ ಇಲ್ಲಿ ಕಂಡ ಪ್ರಪಂಚವಾದರೂ ಯಾವುದು ? 'ಮಾಯದ ಮಂದ, ಕಾಯದ ಕತ್ತಲೆ, ಜೀವದ ಜಂಜಡ'. ಇವುಗಳಲ್ಲಿ ಸಿಲುಕಿದ ಮೇಲೆ ಆವಾಗಳೂ ಮನ ಉದರಕ್ಕೆ ಹರಿಯುವುದು, ಹೊನ್ನು ಹೆಣ್ಣು ಮಣ್ಣುಗಳು ತನ್ನವೆಂದು ಭ್ರಮಿಸುವುದು. ಅಕ್ಕನವರು ಕೆಮ್ಮನೆ ಕೆಟ್ಟುಹೋದರು. ಏನು ಮಾಡಲೂ ತೋಚದಂತಾಯಿತು. ದಿಕ್ಕು ತಪ್ಪಿದ ಹಸುಳೆಯಂತೆ ನೆಟ್ಟ ಮನಸ್ಸಿನಿಂದ ಶಿವನೊಬ್ಬನನ್ನೇ ಕುರಿತು ಹಂಬಲಿಸಿದರು.

"ಬೆಂದ ಒಡಲ ಹೊರೆವುದಕ್ಕೆ ನಾನಾರೆ
ಚನ್ನಮಲ್ಲಿಕಾರ್ಜುನಯ್ಯ !
ಕೊಲ್ಲು ಕಾಯಿ : ನಿಮ್ಮ ಧರ್ಮ."

ಹೃದಯದಲ್ಲಿ ದುಃಖ ತುಂಬಿಕೊಂಡಾಗ ಅಳು ಬಂದು ಆ ದುಃಖ ಕಣ್ಣೀರಾಗಿ ಕೋಡಿಹರಿದು ಹೋದ ಮೇಲೆ ಹೃದಯ ತಾನಾಗಿಯೇ ಹಗುರವಾಗುವುದು. ಇದು ಒಂದು ರೀತಿ.

ಸಾಮಾನ್ಯವಾಗಿ ಅಷ್ಟು ಪ್ರಬುದ್ಧಾತ್ಮರಲ್ಲದ ಚೇತನಗಳಾದ ಬಹು ಮಂದಿ ಮಾಡುವುದು ಹೀಗೆ. ಅದಿಲ್ಲದಿದ್ದರೆ ಹೃದಯ ದುಃಖ ದಿಂದ ತುಂಬಿ ಭಾರವಾದಾಗ ಆ ದುಃಖ ಕಣ್ಣೀರ ಬದಲಾಗಿ ಮನದ ಮಾತಾಗಿ ಹರಿದು ಪರದೈವದಲ್ಲಿ ಅದನ್ನು ಬಿಡಿಸೆಂದು ಬೇಡಿಕೊಳ್ಳುವ ಮೊರೆಯಾಗಿ ನಿಲ್ಲುವುದು. ಆಗ ಹೃದಯುವು ಹಗುರವಾಗುವುದು. ಈ ರೀತಿ ಪ್ರಬುದ್ಧ ಚೇತಸರಿಗೆ ಮಾತ್ರ ಸಾಧ್ಯ. ಅಕ್ಕ ತನ್ನ ಸಂಕಟವನ್ನು ಈ ರೀತಿ ಪರಿಹರಿಸಿಕೊಂಡ ಳೆಂದು ತೋರುತ್ತದೆ. ಈ ಸ್ಥಿತಿಯಲ್ಲಿ ಆತ್ಮಕ್ಕೆ ಕಷ್ಟವನ್ನು ಸಹಿ ಸುವ ಒಂದು ಸಹನಶಕ್ತಿ ಬರುತ್ತದೆ. ತಾಳ್ಮೆ ಶಾಂತಿ ಸ್ಥೈರಣೆಗಳು ಜೀವನದಲ್ಲಿ ತೋರುತ್ತವೆ.

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ !
ಸಮುದ್ರದ ತಡಿಯೊಳಗೊಂದು ಮನೆಯುಮಾಡಿ ನೊರೆತೆರೆಗಳಿಗಂಜಿ
ದಡೆಂತಯ್ಯ !
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ !
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ !
ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದಡೆ,
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಇದು ಜ್ಞಾನಿಯ ಸಮಾಧಾನದಿಂದಾದ ಅಲೌಕಿಕ ಶಾಂತಿ. ಇದನ್ನು ಅಜ್ಞಾನಿಯಾದ ಕೌಶಿಕನು ತಪ್ಪು ತಿಳಿವಳಿಕೆಯಿಂದ ತನ್ನ ವಿಷಯಂದಲ್ಲಿ ಅಕ್ಕನು ಈಗ ಸುಪ್ರಸನ್ನತೆಯುನ್ನು ಹೀಗೆ ಪ್ರಕಟಿಸಿದ್ದಾಳೆ ಎಂದು ಭಾವಿಸಿ ಪ್ರೇಮವನ್ನು ಪ್ರಕಟಿಸುವನು. ಆಗ ಅಕ್ಕ—

ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು
ನೋಡಾ !
ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು
ನೋಡಾ !

ಎಂದು ಅವನನ್ನು ಎಚ್ಚರಿಸಿರಬೇಕು. ಹೀಗೆ ಎಚ್ಚರ ಮರವಿನ ಬಯಲಾಟಗಳು ಅದೆಷ್ಟೊ ನಡೆದು ಹೋಗಿರಬೇಕು. ಅಕ್ಕನ, ಕೌಶಿಕನ ಸಂಸಾರದಲ್ಲಿ ಇಂತಹ ಹಗರಣದ ಪ್ರಕರಣ ಬಂದುದಕ್ಕೆ ಅವರ ವಚನಗಳಿಂದಲೇ ಸಾಕಾರವಾಗಿ ಇನ್ನೊಂದು ದೃಶ್ಯವನ್ನು ಜೋಡಿಸಬಹುದು.

ಕಾಮುಕನಾದ ಕೌಶಿಕನಿಗೆ ಅಕ್ಕನ ಆಧ್ಯಾತ್ಮಿಕ ವೃತ್ತಿ ಸರಿ ಬೀಳಲಿಲ್ಲ. ಹಾಗೆಂದು ಬಲಾತ್ಕಾರಮಾಡುವ ಅರಸಿಕನವನಲ್ಲ. ರೂಪವತಿಯೂ ಗುಣವತಿಯೂ ಆದ ಅಕ್ಕ ಒಲಿದುಬರಬೇಕೆಂದು ಅವನ ಬಯಕೆ. ಅದಕ್ಕಾಗಿ ಆತ ಇನ್ನೊಂದು ಹಂಚಿಕೆಯನ್ನು ಹೂಡಿದನು. ತನ್ನ ಅಂತಃಪುರದ ರಸಿಕ ಸಖಿಯರನೇಕರನ್ನು ಅಕ್ಕನ ಮನಸ್ಸನ್ನು ತಿದ್ದಿ ಅವಳನ್ನು ತನ್ನ ಕಡೆಗೆ ಒಲಿಸಿಕೊಡುವ ಪವಿತ್ರ ಕಾರ್ಯಕ್ಕೆ ನಿಯೋಗಿಸಿದನು : ಈ ಗೆಳತಿಯರು ಅಕ್ಕನ ಸುತ್ತಲೂ ನೆರೆದು ಅವಳ ಮುಂದೆ ಕೌಶಿಕನ ಗುಣಗಾನ ಮಾಡಿದರು. ಆಗಲೂ ಆಕೆ ಕೌಶಿಕನನ್ನು ತಿರಸ್ಕರಿಸಿ ಚನ್ನಮಲ್ಲಿಕಾರ್ಜುನನ ಮೇಲೆ ತನಗಿದ್ದ ಅವಿರಳ ಪ್ರೇಮವನ್ನು ಕುರಿತು ಹೀಗೆ ಹಾಡಿದಳು.

"ಗಿರಿಯಲ್ಲದೆ ಹುಲುಮೊರಡಿಯಲ್ಲಾಡುವುದೇ ನವಿಲು ?<br>ಕೊಳನಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸೆ ?<br>ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ ?<br>ಪರಿಮಳವಿಲ್ಲದ ಪುಷ್ಪಕ್ಕೆಳಸುವುದೆ ಭ್ರಮರ ?<br>ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ, ಅನ್ಯಕ್ಕೆಳಸುವುದೇ<br>ಎನ್ನ ಮನ ಕೇಳಿರೆ ಕೆಳದಿಯರಿರಾ ?

ಕೆಳದಿಯರ ಮೂಗು ಮುರಿದಂತಾಯಿತು. ಕೆಲವರು ಸುಮ್ಮನಿದ್ದರು. ಮತ್ತೆ ಕೆಲವರು ಚನ್ನಮಲ್ಲಿಕಾರ್ಜುನನಿಗಾಗಿ ಈಕೆ

ಪಡುವ ವಿಪ್ರಲಂಭವನ್ನು ಹೀಯಾಳಿಸಿರಬೇಕು. ಅದಕ್ಕೆ ಉತ್ತರ ವೆಂಬಂತೆ

"ಬಂಜೆ ಬೇನೆಯನರಿಯಳು ಬಲತಾಯಿ ಮುದ್ದಬಲ್ಲಳೇ ?
ನೊಂದ ನೋವ ನೋಯದವರೆತ್ತ ಬಲ್ಲರು, ಚನ್ನಮಲ್ಲಿಕಾರ್ಜುನ ?
ನೀನಿರಿದಲಗು ಒಡಲಲ್ಲಿ ಮುರಿದು ಹೊರಳುವಳ
ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ ?"

ಎಂದು ಕಣ್ಣೀರು ಸುರಿಸಿ ಹುಯ್ಯಲಿಡುವಳು. ಇಂತಹ ವಚನಗಳಲ್ಲೆಲ್ಲಾ ನಾವು ಕಾಣುವುದು ಅಕ್ಕ ಮಲ್ಲಿಕಾರ್ಜುನನಲ್ಲಿಟ್ಟಿರುವ ಅವ್ಯಾಜವಾದ ಪ್ರೇಮವನ್ನು. ಆ ಪ್ರೇಮ ಸಿದ್ಧಿಸದೆಹೋದಂದು ತೋರಿಬರುವ ವಿರಹವನ್ನು. ಇಂತಹದೇ ಇನ್ನೊಂದು ವಚನದಲ್ಲಿ ಇದೇ ಭಾವ ಹೆಪ್ಪುಗಟ್ಟಿರುವುದನ್ನು ಕಾಣಬಹುದು:

"ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದರಿಸಿನವೆನಗೆ,
ದಿಗಂಬರವೇ ದಿವ್ಯಾಂಬರವೆನಗೆ–ಶಿವಪಾದರೇಣುವೆ ಅನುಲೇಪನವೆನಗೆ,
ರುದ್ರಾಕ್ಷಿಯೆ ಮೈದೊಡಿಗೆ ಎನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ;
ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಅನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ.
ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ?"

ಇಂತಹ ವ್ಯಂಗ್ಯೋಕ್ತಿಯಿಂದ ಈ ಹಗರಣ ಕೊನೆಗೊಂಡಿರಬೇಕು.

ಕೌಶಿಕನ ರಾಣೀವಾಸದಲ್ಲಿ ಅಕ್ಕನು ಇಂತಹ ದಂದುಗದ ದಿನಗಳನ್ನೆಷ್ಟೋ ನೂಕಿರಬೇಕು ? ಮಾಡುವುದೇನು. "ಚನ್ನ ಮಲ್ಲಿಕಾರ್ಜುನ ಕಟ್ಟಿಕೆಡಹಿದ ಮಾಯೆ" ಅಂತಹುದು. "ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ." ಆದರೂ ದೇವಿ ಇದರ ಕಡೆಗೆ ಹೆಚ್ಚು ಆಸ್ಥೆ ವಹಿಸಲಿಲ್ಲ. "ಚನ್ನ

ಮಲ್ಲಿಕಾರ್ಜುನ ಒಲಿದ ಶರಣಂಗೆ ಮಾಯೆ ಇಲ್ಲ, ಮರವಿಲ್ಲ ಅಭಿಮಾನವೂ ಇಲ್ಲ" ಎಂದಮೇಲೆ ಈ ಮಾಯೆಗೆ ಅಕ್ಕ ಅಂಜಿದಳೆಂದಲ್ಲ. ಅಂಜಿಕೆ ಇಲ್ಲದಿದ್ದರೂ ಈ ಮಾಯೆಯ ನಂಜು ಸಹಿಸುವುದು ಏಕೆಂದು ಅವಳ ಪ್ರಶ್ನೆ. ಇದಕ್ಕೆ ಉತ್ತರ ಬಹುಶಃ ಅವಳ ಇಷ್ಟ ದೈವಕೊಡಬೇಕಿತ್ತು. ಆ ದೈವ ಅವಳಿಗೆ ಸುಪ್ರಸನ್ನವಾಗುವುದು ಅಷ್ಟು ಸುಲಭವಾಗಿರಲಿಲ್ಲ.

"ಆಲಿಸೆನ್ನ ಬಿನ್ನಪವ ಲಾಲಿಸೆನ್ನ ಬಿನ್ನಪವ
ಪಾಲಿಸೆನ್ನ ಬಿನ್ನಪವ ಏಕೆನ್ನ ಮೊರೆಯ
ನೋಡೆನ್ನ ದುಃಖವ ಚನ್ನಮಲ್ಲಿಕಾರ್ಜುನಯ್ಯಾ?"

'ಎನ್ನ ಸುತ್ತಿದ ಪ್ರಪಂಚವ ಬಿಡಿಸಯ್ಯ' ಹೀಗೆಂದು ನಿರಂತರವೂ ಶಿವನಲ್ಲಿಯೇ ಅನನ್ಯ ಭಕ್ತಿಯಿಂದ ಮೊರೆಯಿಡುವುದೊಂದೇ ತನ್ನ ಕರ್ತವ್ಯವೆಂದು ಆಕೆ ಅರಿತಿದ್ದಳು. ಅಷ್ಟೇ ಅಲ್ಲ.

"ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ!
ನಿನ್ನರಿಯದ ಮುಕ್ತಿಯೇ ನರಕ ಕಂಡಯ್ಯ!
ನೀನೊಲ್ಲದ ಸುಖವೇ ದುಃಖ ಕಂಡಯ್ಯ!
ಚನ್ನಮಲ್ಲಿಕಾರ್ಜುನಯ್ಯ!
ನೀ ಕಟ್ಟಿಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪೆನು."

ಹೀಗೆ ಅಕ್ಕನು ಒಂದು ವಿಧವಾದ ತಾತ್ವಿಕ ದೃಷ್ಟಿಯಿಂದ ಶಾಂತಚಿತ್ತಳಾಗಿ ಅದೆಷ್ಟು ಅಡ್ಡಿ ಅಸಂಗತಗಳು ಬಂದರೂ ಶಿವಾನುಭವ ಶಿವಪೂಜೆ ಗುರುಪೂಜೆಗಳಲ್ಲಿ ನಿರತಳಾಗಿದ್ದಳು.

ಇಲ್ಲಿಯುವರೆಗೆ ಅಕ್ಕನ ಆಧ್ಯಾತ್ಮಿಕ ಜೀವನವನ್ನು ಆಕೆಯ ವಚನಗಳಿಂದಲೆ ಚಿತ್ರಿಸಿರುವುದು ಸರಿಯಷ್ಟೆ. ಇಲ್ಲಿಂದ ಮುಂದೆ ಆಕೆಯ ಭಕ್ತಿ ಜೀವನದ ಇನ್ನೊಂದು ಮುಖವಾದ ಗುರುಲಿಂಗ ಜಂಗಮ ಪೂಜೆಯ ವೈಭವವನ್ನು ಹರಿಹರ ಕವಿಯ ರಗಳೆಯ

ಕೆಲವು ಭಾಗಗಳಿಂದ ಚಿತ್ರಿಸಬಹುದು. ಕೌಶಿಕನನ್ನು ಮದುವೆಯಾದ ಮೇಲೆ ಅಕ್ಕನ ಶಿವಪೂಜಾಸಕ್ತಿ ವಿಶೇಷವಾಗಿ ಬೆಳೆಯಿತು. ಆಕೆ ಮೊದಲೆ ಶಿವಭಕ್ತೆ, ಇದರ ಮೇಲೆ ಯಾವುದೋ ನಿರ್ಬಂಧದಿಂದ ಮದುವೆಯಾದವಳು; ಈ ಮದುವೆಯೆ ತನ್ನ ವೈರಾಗ್ಯಕ್ಕೆ ನಿಮಿತ್ತವಾದವಳು, ಈ ವೈರಾಗ್ಯವೆ ಬಲಿಯ ಬೇಕೆಂಬ ಭಾವನೆಯಿಂದ ಕೆಲವು ನಿಬಂಧನೆಗಳನ್ನೊಡ್ಡಿ ಕೌಶಿಕನ ಕೈಹಿಡಿದವಳು. ಆದುದರಿಂದಲೆ ಅವಳ ಶಿವಭಕ್ತಿ ಅತಿಶಯವಾಯಿತು. ಹತ್ತೂ ದಿಕ್ಕಿನಿಂದ ಗುರು ಜಂಗಮರ ಪಡೆ ಉಡುತಡಿಗೆ ಬಂದು ಸೇರಿತು. ಇವರೆಲ್ಲರ ಆದರಾತಿಥ್ಯಗಳನ್ನೂ ಅಕ್ಕನೆ ವಹಿಸಿಕೊಂಡಳು. ಅವಳ ನಿತ್ಯ ಜೀವನದಲ್ಲಿ ಈ ವಿಧದ ಜಂಗಮ ದಾಸೋಹವೂ, ಲಿಂಗಪೂಜೆಯೂ ಬಹು ಮುಖ್ಯವಾದ ಭಾಗವಾಗಿ ಪರಿಣಮಿಸಿದುವು. ಹರಿಹರ ಕವಿಯಂತೂ ಅಕ್ಕನ ಭಕ್ತಿ ಜೀವನದ ಈ ಭಾಗದ ಕಥೆಯನ್ನು "ರಮ್ಯೋಜ್ವಲ ಕಾವ್ಯ"ವಾಗಿ ಚಿತ್ರಿಸಿದ್ದಾನೆ. ಈ ಕೆಳಗೆ ಬಹುಮಟ್ಟಿಗೆ ಅವನ ಮಾತುಗಳನ್ನೆ ಬಳಸಿಕೊಂಡು ಅಕ್ಕನ ಲಿಂಗಪೂಜಾವೈಭವವನ್ನು ಅತಿ ಸಂಗ್ರಹವಾಗಿ ಚಿತ್ರಿಸಿದೆ.

ಕೌಶಿಕನ ಮನೆಯಲ್ಲಿದ್ದಷ್ಟು ಕಾಲವೂ ಅಕ್ಕ ಪ್ರತಿದಿನವೂ ಪರಿಮಳಪೂರಿತವಾದ ನಿರ್ಮಲೋದಕದಲ್ಲಿ ಮೀಯುವಳು. ಬಿಳಿಯ ಬಟ್ಟೆಯನ್ನು ಉಟ್ಟು ಹೊಸದಾಗಿ ಸೌರಭವನ್ನು ಸೂಸುತ್ತಿರುವ ಇರುವಂತಿಗೆ, ಸೇವಂತಿಗೆ, ಸಂಪಿಗೆ, ಕೇತಕಿ ಮೊದಲಾದ ಹೂಗಳನ್ನು ಮುಡಿದು ತಿಲಕ ಚಂದನಾದಿಗಳಿಂದ ಅಲಂಕೃತಳಾಗುವಳು. ಸ್ವಭಾವ ಸುಂದರಿಯಾದ ಆಕೆ ಮುತ್ತು ಮಾಣಿಕದ ಹಲವು ತೆರದ ತೊಡವುಗಳನ್ನು ತೊಟ್ಟು, ಹೊನ್ನಪಾದುಕೆಗಳನ್ನು ಮೆಟ್ಟಿ "ಚೆನ್ನ ಮಲ್ಲಿನಾಥನಲ್ಲಿಗಚಲ ಸುಖಮುನಾಂಕೆ ಗೊಟ್ಟು" ಇಂದುಧರನ ಪೂಜೆಗಾಗಿ ಪರಮಭಕ್ತೆಯೂ ಶಾಂತಿಯುಕ್ತೆಯೂ

ಯಂತಿವಿರಕ್ತೆಯೂ ಆದ ಅಕ್ಕ ತನ್ನ ಪರಿವಾರದವರೊಂದಿಗೆ ಪೂಜಾ ಮಂದಿರವನ್ನು ಪ್ರವೇಶಿಸುವಳು. ಅಲ್ಲಿ ಸುಖಾಸೀನೆಯಾಗಿ ಚೆನ್ನನ ಪೂಜೆಗಾಗಿ ಸೆಜ್ಜೆಯನ್ನು ತೆಗೆಯುವಳು. "ಬಳ್ಳಿವರಿವ ನೇಹದು ಸುರ ಧೂಪ ಧೂಮವೆುಸೆಯೆ ನೀಡಿ, ನಯನಕಾಂತಿರತ್ನ ರೋಚಿ ಯಿಂದಲಾರತಿಗಳನೆತ್ತಿ, ಭಯದ ಭಕ್ತಿಯೋಗದರಳನಿತ್ತು ಮನ ದೊಳೆಯ್ದೆ ಮುತ್ತಿ ಅರ್ಚಿಸುವುದರಿಂದ ಮುನ್ನವರ್ಚನಾವಿಳಾ ಸಮಾ"ಗುವುದು. ಅಕ್ಕ ಬಿಟ್ಟ ಉಸಿರು ಧೂಪ, ನೆಟ್ಟ ನೋಟ ದೀಪ, ಪಟ್ಟ ಭಯ ಪುಷ್ಪ–ಹೀಗೆ ಪೂಜೆಗೆ ಮೊದಲೆ ಮಾನಸ ಪೂಜೆ ನಡೆಯುವುದು. ಆ ಬಳಿಕ ಅನನ್ಯ ಭಕ್ತಿಯಿಂದ ಅಕ್ಕನು ಈಶ್ವರನನ್ನು ಕುರಿತು ಪ್ರಾರ್ಥಿಸುವಳು : "ಗುರುವೆ ಬಾರ ಪರವೆ ಬಾರ ವರವೆ ಬಾರ ದೇವದೇವ, ಹರನೆ ಬಾರ ಸುಕೃತ ಸಾರ ತತ್ವ ಬಾರ ಬಾರ ದೇವ."

ಹೀಗೆ ಈಶ್ವರನನ್ನು ತದೇಕಚಿತ್ತದಿಂದ ಧ್ಯಾನಿಸಿ ಆವಾಹನಂ ಗೈಡು ಕರತಳಕ್ಕೆ ಬಂದು ನೆಲಸಿದ ಅವನನ್ನು ನೋಡಿ "ಹರುಷ ದಿಂದ ಉರದೊಳೆತ್ತಿ ಮತ್ತೆ ನೋಡಿ ಮುದ್ದನಿತ್ತು ನಲ್ಲ ಸುಖಕೆ ಬಲ್ಲುದೊಂದು ಸೊಲ್ಲ ಹಾಡಿ" ಪರಿಮಳೋದಕದಿಂದ ಮಜ್ಜನ ಮಾಡಿಸಿ ವಿಧವಿಧವಾದ ಹೂಪತ್ರೆಗಳಿಂದ ಅಲಂಕರಿಸಿ ಲಿಂಗ ಮೂರುತಿಯನ್ನು ಸಿಂಗರಿಸುವ ಸಡಗರದಲ್ಲಿ ಮೈಮರೆತು "ತನ್ನ ರೂಪು ಲಿಂಗದೊಳಗೆ ಲಿಂಗರೂಪು ಹೃದಯದೊಳಗೆ" ಭಿನ್ನವಿಲ್ಲ ದಂತೆ ತೋರಲು "ಅಂಗ ಲಿಂಗ ಸಂಗ ಸುಖ"ವನ್ನು ಅಪ್ಪುವಳು. ಕಣ್ಣಿನಲ್ಲಿ ಆನಂದಬಾಷ್ಪವೂ ದೇಹದಲ್ಲಿ ರೋಮಾಂಚವೂ ಕಂಠ ದಲ್ಲಿ ಗದ್ಗದ ಸ್ವರವೂ ತೋರಿ ಬರುತ್ತಿರಲು ಪೂಜೆಯು ಮುಂದು ವರಿಯುವುದು. ವಿಧವಿಧವಾದ ಪಕ್ವಾನ್ನಗಳ ನೈವೇದ್ಯವಾದ ಮೇಲೆ ಮೃದಂಗ, ಕಹಳೆ, ಭೇರಿ, ತಮ್ಮಟೆ ಮುಂತಾದ ವಾದ್ಯ

ಗಳು ಮೊರೆಯುತ್ತಿರಲು ಮಂಗಳಾರತಿಯನ್ನೆತ್ತುವಳು. ಗೀತ ಮಯವಾದ ಭಕ್ತಿಭಾವ ಪೂರ್ಣವಾದ ಸ್ತೋತ್ರಗಳನ್ನು ಹಾಡು ವಳು, ಬಿನ್ನಪಗಳನ್ನು ರಚಿಸುವಳು, ನೆರೆದ ಶರಣಸಂದೋಹವನ್ನು ಅತಿಥಿ ಪೂಜೆಯಿಂದ ತೃಪ್ತಿಪಡಿಸುವಳು.

ಇಷ್ಟು ವೈಭವದಿಂದ ನಡೆಯುತ್ತಿದ್ದ ಅಕ್ಕನ ಶಿವಾನುಭವ ಶಿವಪೂಜೆ ಗುರುಜಂಗಮರ ಸೇವೆ ಮೊದಲಾದ ಶಿವಾಚಾರಗಳು ಭವಿಯಾದ ಕೌಶಿಕನಿಗೆ ಎಷ್ಟು ಮಾತ್ರವೂ ಸಹಿಸುತ್ತಿರಲಿಲ್ಲ. ಆದರೆ ಮಾತಿಗೆ ಕಟ್ಟುಬಿದ್ದುದರಿಂದ ಅಕ್ಕನ ಗೊಡವೆಗೆ ಹೋಗದೆ ಮತ್ತೆ ಕೆಲಕಾಲ ಅರಸು ಸುಮ್ಮನಿದ್ದನು, ತಾನಾಗಿಯೆ ಅಕ್ಕ ಒಲಿದು ಬರಬಹುದು ಎಂದು. ಆದರೆ ವಿಧಿಯ ಎಣಿಕೆಯೆ ಬೇರೆಯಾಗಿದ್ದಿತು. ಕಡೆಗೂ ಅಕ್ಕ ಕೌಶಿಕನ ಸಂಸಾರವನ್ನು ಬಿಟ್ಟು ಪರಮ ವಿರಕ್ತೆಯಾಗಿ ಹೊರಟು ಹೋಗುವಳು. ಹರಿ ಹರನ ರಗಳೆಯಲ್ಲಿ ಅಕ್ಕ ಕೌಶಿಕನನ್ನು ತ್ಯಜಿಸಿ ಹೋದ ವಿವರ ಹೀಗೆ ಬಂದಿದೆ :

ಒಮ್ಮೆ ಮಾಹೇಶ್ವರರ ತಂಡವೊಂದು ಅಕ್ಕನವರನ್ನು ಸಂದರ್ಶಿಸ ಬೇಕೆಂದು ಅರಮನೆಯ ಬಾಗಿಲಿಗೆ ಬಂದಿತು. ದ್ವಾರಪಾಲಕನು ಈ ಸುದ್ದಿಯನ್ನು ಅರಸನಿಗೆ ತಿಳಿಸಿದನು. ಅರಸನು ಈಗ ಸಮಯವಲ್ಲವೆಂದು ತಾನೆ ಹೇಳಿಕಳುಹಿಸಿದನು. ಈ ಮಾತು ಅಕ್ಕನ ಕಿವಿಗೆ ಮುಟ್ಟಿತು. ಆಕೆ ಅತಿ ದುಃಖಿತೆಯಾಗಿ "ಕೆಟ್ಟೆ ಕೆಟ್ಟೆನದಾರನೆಂದಪೆ ! ಶಿವಭಕ್ತರನೆ ? ಬೆಂದೆ ಬೆಂದೆ, ಶಿವ ಶಿವಾ ! ಸುಡುಸುಡು, ಕೆಟ್ಟ ಭವಿಯೇ! ಫಡಫಡ ಪಚ್ಚಪಸಿಯ ಪಾತಕನೆ, ನಿನ್ನ ದೆಸಿಯಿಂ ಭಕ್ತರ ನಿಂದೆಯಂ ಕೇಳ್ವಂತಾದುದಿನ್ನೇವೆ" ಎಂದು ಅತ್ತಳು. ಕೌಶಿಕನು ಅಕ್ಕನ ಕಾಲುಗಳ ಮೇಲೆ ಬಿದ್ದು, "ಸೈರಿಸುವುದು, ಒಂದು ಅಪರಾಧವಾಯಿತು," ಎಂದು ಅಂಗ

ಲಾಚಿದನು. "ನಿನ್ನ ಮೂರು ತಪ್ಪಿನೊಳು ಒಂದು ತಪ್ಪುಸಂದುದು, ಏಳೇಳು ಮುನಿಸಿಲ್ಲ" ಎಂದು ಅಕ್ಕನು ಕೌಶಿಕನನ್ನು ಮನ್ನಿಸಿ ಮಾಹೇಶ್ವರರನ್ನು ಸತ್ಕರಿಸಿದಳು.

ಇನ್ನೊಮ್ಮೆ ಎಂದಿನಂತೆ ಅಕ್ಕ ಲಿಂಗಪೂಜಾನಿರತಳಾಗಿದ್ದಾಗ ಕಾಮುಕನಾದ ಕೌಶಿಕನು ಅವಳನ್ನು ಮುಟ್ಟ ಬಂದನು. "ನಿನ್ನ ಎರಡು ತಪ್ಪುಗಳು ಸಂದುಹೋದುವು. ಇನ್ನು ಮುಂದಾದರೂ ಎಚ್ಚರಿಕೆಯಿಂದಿರು" ಎಂದು ಅಕ್ಕ ಗದರಿಸಿದಳು. ಇದೇ ರೀತಿಯಲ್ಲಿ ಇನ್ನೊಂದು ದಿವಸ ಗುರುಪೂಜಾನಿರತಳಾಗಿದ್ದ ಅಕ್ಕನನ್ನು ಕೌಶಿಕನು ಕೆಣಕಿ ಬರಲು ಅಕ್ಕ ಸಂಪೂರ್ಣವಾಗಿ ಅವನ ಸಹವಾಸವನ್ನು ತ್ಯಜಿಸಿ ಹೊರಟಳು. ಮುಂದೆ ಅಕ್ಕ ಶ್ರೀಶೈಲ ಪರ್ವತದ ಕಡೆಗೆ ಹೋಗುತ್ತಿದ್ದಾಗ ಮತ್ತೆ ಕೌಶಿಕನು ಅವಳನ್ನು ಮಾಯಾವೇಷದಿಂದ ಕೆಣಕಿದನು ಎಂದೂ ಅಲ್ಲಿಯೂ ಅಕ್ಕ ಅವನನ್ನು ಭಂಗಿಸಿ ಮುಂದುವರಿದಳು ಎಂದೂ ಹರಿಹರನು ಹೇಳಿದ್ದಾನೆ.

ಕೌಶಿಕನ ಮನೆಯನ್ನು ಬಿಟ್ಟು ಹೊರಹೊರಟಾಗ ಅಕ್ಕನ ಮನೋಭಾವ ಎಂಥದಿತ್ತು ಎಂಬುದನ್ನು ಆ ವೇಳೆಯಲ್ಲಿ ಆಕೆ ಹಾಡಿಕೊಂಡಿರಬಹುದಾದ ವಚನಗಳಿಂದ ಅರಿಯಬಹುದು.

'ಎನಗೇಕಯ್ಯಾ ಸಾವ ಪ್ರಪಂಚಿನ ಪುತ್ಥಳಿ, ಮಾಯಿಕದ ಮಲಭಾಂಡ, ಆತುರದ ಭವನಿಳಯ?' ಅರಮನೆಯೆಂಬ ಸೆರೆಮನೆಯನ್ನು ಬಿಟ್ಟು ಬಂದ ಅಕ್ಕ ಆದರ ಸಂಪರ್ಕ ಸಂಪೂರ್ಣವಾಗಿ ತೊಡೆಯಲೆಂದು ಉಡಿಗೆ ತೊಡಿಗೆಯನ್ನು ತ್ಯಜಿಸಿಬಿಟ್ಟಳೆಂದು ತೋರುತ್ತದೆ. ನಾಚಿಕೆ ಏಕೆ, ದೋಷವೇನು? "ಚನ್ನಮಲ್ಲಿಕಾರ್ಜುನಂಗೆ ಜಗವೆಲ್ಲ ಕಣ್ಣಾಗಿರಲು ಮುಚ್ಚುಮರೆಸುವುದೇ!" ಊಟ ವಸತಿಗಳ ಹಂಬಲವನ್ನೂ ಅಕ್ಕ ತೊರೆದಳು.

"ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳುದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯ!
ಆತ್ಮಸಂಗಾತಕ್ಕೆ ನೀನೆನಗುಂಟು."

ಇದಕ್ಕಿಂತ ಹೆಚ್ಚೇನು ಬೇಕು.

"ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡಯ್ಯ.
ಏನುಮಾಡಿದಡೆಯು ನಾನಂಜುವವಳಲ್ಲ.
ತರಗೆಲೆಯ ಮೆಲ್ಲಿದ್ದು ನಾನಿಹೆನು.
ಸುರಿಗೆಯ ಮೇಲೊರಗಿ ನಾನಿಹೆನು
ಚನ್ನಮಲ್ಲಿಕಾರ್ಜುನಯ್ಯ ಕರಕೆಡೆ ನೋಡಿದೊಡೆ,
ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು."

ಇದು ಬರಿಯ ಬಾಯಿ ಮಾತಲ್ಲ. ಆಕೆಯ ಮನೋಧರ್ಮ ಎಂಥಾದ್ದು ಎಂಬುದನ್ನು ಈ ಮುಂದಿನ ಮಾತುಗಳಲ್ಲಿ ಕಾಣಬಹುದು :

"ಕಿಡಿ ಕಿಡಿ ಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು.
ಮುಗಿಲು ಹರಿದು ಬಿದ್ದಡೆ, ಎನಗೆ ಮಜ್ಜನಕ್ಕೆರೆದರೆಂಬೆನು.
ಗಿರಿ ಮೇಲೆ ಬಿದ್ದಡೆ, ಎನಗೆ ಪುಷ್ಪವೆಂಬೆನು.
ಚನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದಡೆ
ಪ್ರಾಣ ನಿನಗರ್ಪಿತವೆಂಬೆನು."

ಎಂತಹ ನಿಶ್ಚಲ ಮನೋಧರ್ಮ, ಎಂತಹ ವೀರ ವೈರಾಗ್ಯ ! ಇದು ಅಕ್ಕನಿಗೆ ಮಾತ್ರ ಸಾಧ್ಯ. ಈಗ ಅಕ್ಕನ ಬಾಳುವೆ ಹತ್ತಲ್ಲಿ ಹನ್ನೊಂದಾದ ನೀರುತಾವರೆಯಂತೆ. ಅವಳಿಗೆ ಪ್ರಪಂಚದಲ್ಲಿ ಆಸರೆ ಇಲ್ಲ. ಸಂಸಾರದಲ್ಲಿ ಸುಖವಿಲ್ಲ. ಪ್ರಪಂಚವನ್ನೂ ಸಂಸಾರವನ್ನೂ ತೊರೆದು, ದೇಹಾಭಿಮಾನವನ್ನೂ ಆತ್ಮಾಭಿಮಾನ

ವನ್ನೂ ಮರೆತು ಚನ್ನಮಲ್ಲಿಕಾರ್ಜುನನನ್ನು ಸಂದರ್ಶಿಸುವ ಏಕ ಮಾತ್ರ ಧ್ಯೇಯದಿಂದ ಹೊರಬಿದ್ದಳು. ಈ ಸ್ಥಿತಿಯಲ್ಲಿ ಅವಳು ನಶ್ವರವಾದ ಈ ದೇಹವನ್ನು ಎಷ್ಟು ತಾತ್ಸಾರ ಭಾವದಿಂದ ಕಂಡಳೆಂಬುದನ್ನು ಈ ವಚನದಿಂದ ಚೆನ್ನಾಗಿ ಅರಿತುಕೊಳ್ಳ ಬಹುದು.

"ಹಣ್ಣ ಮೆದ್ದ ಬಳಿಕ ಆ ಮರವನಾರು ತರಿದರೇನು ?
ಹೆಣ್ಣ ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು ?
ಮಣ್ಣ ಬಿಟ್ಟ ಬಳಿಕ ಆ ಕೆಯ್ಯಿಯನಾರುತ್ತರೇನು ?
ಚನ್ನಮಲ್ಲಿಕಾರ್ಜುನನರಿದ ಬಳಿಕ ಆ ಕಾಯವ
ನಾಯಿ ತಿಂದರೇನು ನೀರಕುಡಿದರೇನು?"

ಇಲ್ಲಿಗೆ ಮಹದೇವಿಯಕ್ಕನ ಜೀವನದಲ್ಲಿ ಎರಡನೆಯ ಘಟ್ಟ ಮುಗಿದಂತಾಯಿತು. "ಯೌವನ ಮದೋನ್ಮತ್ತ ವಿಲಾಸ ವಿಭ್ರಮ ಕಳಾ ಪರಿಪೂರ್ಣ ಶರೀರೆ"ಯಾಗಿದ್ದ ಮಹದೇವಿ ಕೌಶಿ ಕನ ವಿಷಯೋಪಭೋಗದ ಸುವರ್ಣ ಪಂಜರದಲ್ಲಿ ಪಂಚ ವರ್ಣದ ಗಿಳಿಯಂತೆ ಬಂಧಿತಳಾಗಿದ್ದಳು. ಇನ್ನು ಯಾವ ಹೆಣ್ಣಿ ಗಾದರೂ ಆ ಬಂಧನ ಹಿತವಾಗಿರುತ್ತಿತ್ತು. ಅದನ್ನೆ ಸುಖ ಎಂದ ರಿತುಕೊಂಡು ಅಲ್ಲಿರುತ್ತಿದ್ದಳು. ಆದರೆ ಅಕ್ಕನು ಆ ಕ್ಷಣ ಮಾತ್ರದ ಸುಖಕ್ಕೆ, ಶಾಶ್ವತವಾದ ದಾಸ್ಯಕ್ಕೆ ಮರುಳಾಗಲಿಲ್ಲ. ಏಕೆಂದರೆ ಈಕೆ ಧೀರೆ, ವೀರೆ, ವಿರಾಗಿಣಿ. ರಾಗ ಭೋಗ ಮಿಕ್ಕ ಹೆಣ್ಣಿನಂತೆ ಅಕ್ಕನಲ್ಲಿಯೂ ಇದ್ದುವು. ಅದಿಲ್ಲದವಳು ಹೆಣ್ಣಲ್ಲ. ಆದರೆ ಮಿಕ್ಕ ಹೆಣ್ಣುಗಳಲ್ಲಿಲ್ಲದ ತ್ಯಾಗ ಯೋಗಗಳು ಇವಳಲ್ಲಿ ದ್ದುದು ಒಂದು ವಿಶೇಷ. ಈ ಕಾರಣದಿಂದ ಅಕ್ಕ ತನ್ನ ಸಾಧನೆ ಆತ್ಮಾನುಸಂಧಾನಗಳಿಂದ ರಾಗಭೋಗಗಳನ್ನು ಗೆದ್ದು ಯೋಗ ತ್ಯಾಗಗಳನ್ನು ಹಿಡಿದಳು.

ಜೀವನದಲ್ಲಿ ಒಂದು ಜಿಹಾಸೆ, ಸಂಸಾರದಲ್ಲಿ ಒಂದು ನಿರಾಸೆ ಬರಬೇಕಾದರೆ ಮನುಷ್ಯನಿಗೆ ತಾತ್ಕಾಲಿಕವಾದ ಹೃದಯ ಸ್ಫೂರ್ತಿಯಿಂದ ಬರುವುದಿಲ್ಲ. ನಿರಂತರವೂ ಸಂಸಾರದಲ್ಲಿ ತೊಳಲಿ ಬಳಲಿ, ಅದರ ಕಷ್ಟನಷ್ಟಗಳಲ್ಲಿ ಬೇನೆಬೇಸರಗಳಲ್ಲಿ ನುರುಗಿ ಹಣ್ಣಾದ ಆತ್ಮರುಗಳಿಗೆ ಈ ವಿಧವಾದ ವೀರ ವೈರಾಗ್ಯ ಸಾಧ್ಯ. ಇದು ಅಭಾವ ವೈರಾಗ್ಯವಲ್ಲ, ಸ್ವಭಾವ ವೈರಾಗ್ಯ. ಇದರ ಅರ್ಥ ; ಈ ಸಂಸಾರ ನಶ್ವರ, ಈ ದೇಹ ನಶ್ವರ, ಇದಕ್ಕೂ ಹಿರಿದೂ ಮಿಗಿಲೂ ಆದ ಶಾಶ್ವತವಾದ ಸುಖ ಒಂದಿದೆ, ಆನಂದ ಒಂದಿದೆ, ಶಾಂತಿ ಒಂದಿದೆ ಎಂಬುದರ ಅರಿವಾಗಿ ಆತ್ಮ ಅದನ್ನು ಸಾಧಿಸುವುದರಲ್ಲಿ ಆಸಕ್ತವಾದರೆ ಆಗ ಇಂತಹ ವೈರಾಗ್ಯ ಬರುತ್ತದೆ ಎಂದು. ಅಕ್ಕನ ವೈರಾಗ್ಯ ಈ ರೀತಿಯದು. ಈ ವೈರಾಗ್ಯ ಇಷ್ಟು ತೀವ್ರವೂ ವೀರವೂ ಆದುದಕ್ಕೆ ಆಗ ತನಗೆ ಒಲ್ಲದ ಸಂಸಾರದಲ್ಲಿ ನರಳಿದುದು ಕಾರಣ. ತನಗೊಗ್ಗದ ಭವಿಯೊಬ್ಬನ ಸಹವಾಸವೂ ಕಾರಣ.

ಇಲ್ಲಿ ಒಂದು ವಿಚಾರ ಹಲವರ ಮನಸ್ಸನ್ನು ತೆರೆದಿದೆ. ಅಕ್ಕನು ನಿಜವಾಗಿಯೂ ಮದುವೆಯಾಗಿದ್ದಳೇ ಎಂಬುದೇ ಅದು. ಅಕ್ಕನ ಪುರಾಣಗಳನ್ನು ಬರೆದ ಕವಿಗಳಲ್ಲಿ ಕೆಲವರು ಆಕೆಗೆ ಮದುವೆಯಾಗಿತ್ತು ಎಂದೂ ಕೆಲವರು ಆಗಿರಲಿಲ್ಲವೆಂದೂ ಹೇಳುತ್ತಾರೆ. ಅಕ್ಕನ ಜೀವನ ಚರಿತ್ರೆಯನ್ನು ತಿಳಿಸುವ ಆಕರ ಗ್ರಂಥಗಳಲ್ಲಿ ಒಂದಾದ ಶೂನ್ಯ ಸಂಪಾದನೆಯಲ್ಲಿ ಐದು ವಿವಿಧ ಪರಿಷ್ಕರಣಗಳಿವೆಯೆಂದೂ ಅವುಗಳಲ್ಲೆಲ್ಲಾ ಅಕ್ಕನ ಚರಿತ್ರೆಯನ್ನು ಕುರಿತ ಭಾಗ ಹೆಚ್ಚು ವಿಸ್ತಾರವಾಗಿ ನಿರೂಪಿತವಾಗಿರುವುದು ಹಲಗೆಯ ದೇವರ "ಶೂನ್ಯಸಂಪಾದನೆ"ಯ ಪರಿಷ್ಕರಣದಲ್ಲಿಯೇ ಎಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮೇಲೆ ಕಾಣಿ

ಸಿದ ಅಕ್ಕನಿಗೆ ಮದುವೆಯಾಗಿತ್ತೆ ಇಲ್ಲವೇ ಎಂಬ ಅತಿ ಜಟಿಲವಾದ ಪ್ರಶ್ನೆಗೆ ಹಲಗೆಯ ದೇವರ ಪ್ರತಿಯಲ್ಲಿ ಉತ್ತರ ಹೆಚ್ಚು ಸ್ಪಷ್ಟವಾಗಿ ದೊರೆಯುವಂತಿದೆ, ಶೂನ್ಯಸಂಪಾದನೆಯ ವಿಕ್ಕ ಪರಿಷ್ಕರಣಗಳಲ್ಲಿ "ಭವಿಯ ಸಂಗಮಂ ತೊರೆದು" "ಅಂಗ ಸಂಗಮಂ ತೊರೆದು" "ಲಿಂಗಧಾರಣವಾಗಲೊಲ್ಲೆವೆಂದ ಭವಿಯ ಸೋಂಕದೆ ಅಂಗಸಂಗಮಂ ತೊರೆದು" ಎಂದಿಷ್ಟೆ ಹೇಳಿ ಆ ಭವಿಯ ಹೆಸರನ್ನು ಕೂಡ ಎತ್ತದೆ ಸೂಚಿಸಿ "ಮದುವೆಯ ವಿಚಾರವನ್ನು ತೇಲಿಸಿಯೋ ನಿಷೇಧಿಸಿಯೋ ಮುಗಿಸಿಬಿಟ್ಟಿದ್ದಾರೆ." ಹಲಗೆಯ ದೇವರ ಪರಿಷ್ಕರಣದಲ್ಲಾದರೆ ಈ ವಿಷಯ ಹೆಚ್ಚು ಸ್ಪಷ್ಟವಾಗಿ ನಿರೂಪಿತವಾಗಿದೆ. ಅಕ್ಕ "ದೇವಿಯರಿತ್ತ ಅವಧಿ ಬರೆ ಕೌಶಿಕನೆಂಬ ರಾಯಂಗೆ ವಧುವಾಗಿ ನೀರುತಾವರೆಯಂತೆ ಕಣ್ಣು ಕಾಡಿಗೆಯಂತೆ ನೆಯಿನಾಲಗೆಯಂತೆ ಗಾಳಿಧೂಳಿನಂತೆ ಆ ಸಂಸಾರದೊಳಗಿದ್ದೂ ಇಲ್ಲದೆ ತನುವನೇ ಸಂಸಾರಕ್ಕೆ ಎರವಾಗಿ ಕೊಟ್ಟು ಮನವೆಚ್ಚ ಲಿಂಗದಲ್ಲಿದ್ದು ಗುರುಚರಲಿಂಗದಲ್ಲಿ ಪರಮ ದಾಸೋಹದಲ್ಲಿ ಭಕ್ತಿಯ ಮಾಡುವಲ್ಲಿ ಆತ ಕೊಟ್ಟ ಭಾಷೆಗೆ ಉತ್ತರವಂ ಮಾಡಿ ಹೋಗುತ್ತಿರೆ ಸೀರೆಯಂ ಪಿಡಿದೆಳೆಯೆ ಬಿಟ್ಟು ದಿಗಂಬರಿಯಾಗಿ ದಿಗಂಬರನ ನೆನವುತ್ತ" ಹೊರಹೊರಟಳೆಂದು ಹೇಳಿದೆ. ಹರಿಹರನ ರಗಳೆಯಲ್ಲಿಯೂ ಈ ವೃತ್ತಾಂತ ಹೀಗೆಯೇ ಬಂದಿದೆ. ಇದರ ಮೇಲೆ ಅಕ್ಕ ಕೌಶಿಕನ ಅರಮನೆಯಲ್ಲಿ ಲಿಂಗಪೂಜಾನಿರತಳಾಗಿದ್ದಾಗ ಭಕ್ತಿಪೂರಿತ ಸ್ತೋತ್ರ ಪದಗಳನ್ನು ಹಾಡುತ್ತಲಿದ್ದಳೆಂದು ಹರಿಹರನು ಹೇಳಿದ್ದಾನೆ.

"ಗೀತದೊಳಗೆ ಸೂತ್ನಭಕ್ತಿ ಜಾತವಾಗಲೊತು ಪಾಡಿ
ಗೀತದೊಳಗೆ ಶರ್ವನರಿವು ತೆರಹುಗುಡದೆ ತೀವಿ ಪಾಡಿ"

ಈಶ್ವರನಲ್ಲಿ ತನ್ನ ಪ್ರಾರ್ಥನೆಯನ್ನು ನಿವೇದನೆ ಮಾಡಿಕೊಂಡ

ಳೆಂದು ಹರಿಹರನು ಹೇಳಿದ್ದಾನೆ. ಇಲ್ಲಿ ಅವಳು ಪ್ರಾರ್ಥಿಸಿದ್ದು "ಭವಿಯು ಸಂಗವಮಾಣ್ಬುದೆಂದು" ಎಂಬುಂದಾಗಿ ಹರಿಹರನೇ ಪೇಳಿದ್ದಾನೆ. ಅಕ್ಕ ಅಂದಂದಿನ ಅನುಭವವನ್ನು ಗೀತ ರೂಪದಲ್ಲಿ ಹಾಡುತ್ತಿದ್ದಳೆಂದು ಹೇಳಿ ಗೀತದ ಸಂದರ್ಭ, ವಿಷಯಂಗಳನ್ನೂ ಅವಳ ವಚನದಿಂದಲೇ ಹರಿಹರನು ಆಯ್ದು ಕೊಟ್ಟುದಕ್ಕೆ ಕೆಲವು ನಿದರ್ಶನಗಳಿವೆ. ಈ ಸಂದರ್ಭದಲ್ಲಿ ಭವಿಯು ಸಂಗ ವನ್ನು ನೀಗಿಸು ಎನ್ನುವುದಕ್ಕೆ ಅಕ್ಕನ ಒಂದು ವಚನ ಇದ್ದಿರ ಬೇಕು. ಆ ವಚನ ಸಿಕ್ಕಿದಂದು ಅಕ್ಕನ ಮದುವೆಯ ಪ್ರಶ್ನೆ ಇತ್ಯರ್ಥವಾಗುತ್ತದೆ. ಅಕ್ಕನು ಬರೆದ ವಚನಗಳು ಸಮಗ್ರವಾಗಿ ಸಂಕಲಿತವಾದ ಬಿಡಿಹೊತ್ತಗೆಯೊಂದು ಈವರೆಗೆ ಎಲ್ಲಿಯೂ ದೊರೆತಿಲ್ಲವಾದುದರಿಂದ ಈಗ ಸಿಕ್ಕಿದಷ್ಟೆ ವಚನಗಳಿಂದ ಏನನ್ನೂ ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲವಾಗಿದೆ. ಆದರೂ ಈಗ ದೊರೆ ಯುವಷ್ಟೆ ವಚನಗಳನ್ನು ನೋಡಿದರೆ ಕೌಶಿಕ ಎಂಬ ನಲ್ಲನ ಹೆಸ ರನ್ನು ಆಗ ಹೇಳದಿದ್ದರೂ ಸಾವಕೆಡುವ ಯಾವುದೋ ಒಂದು ಈ ಪ್ರಪಂಚದ ಪುತ್ತಳಿಯೊಡನೆ ಕೂಡುವ ದುರ್ವಿಧಿ ಆಕೆಗೆ ಒದ ಗಿರಬೇಕು ಎನಿಸುತ್ತದೆ. ಆ ಪುತ್ತಳಿಯೊಡನೆ ಕೆಲಕಾಲ ಬಾಳಿ, ಆ ಕಷ್ಟದ ಮೂಸೆಯಲ್ಲಿ ಇವಳ ಆತ್ಮ ಕುದಿದು ಕರಗಿ ಕಾಳಿಕೆ ಕಳೆದು ಚಿನ್ನವಾಯಿತು. ಆ ಚಿನ್ನ ಮುಂದೆ ಚನ್ನಮಲ್ಲಿಕಾರ್ಜುನನ ಕೊರಳ ಕಂಠಿಕೆಯಾಯಿತು. ಹೀಗೆಂದು ಆಕೆಯ ವಚನವನ್ನೋದಿದ ಯಾರಿಗಾದರೂ ಎನಿಸುತ್ತದೆ.

೩

"ಚಿನ್ನಕ್ಕರಿಸಿನ ಚಿನ್ನಕ್ಕರಿಸಿನ ಚಿನ್ನಕ್ಕರಿಸಿನವ ಕೊಳ್ಳಿರವ್ವಾ !
ನಮ್ಮನಲ್ಲನ ಮೆಯ್ಯ ಹುತ್ತವ ಅರಿಸಿನವ ಕೊಳ್ಳಿರವ್ವಾ !
ಒಳಗುಂದದರಿಸಿನವ ಮಿಂದು ಚನ್ನಮಲ್ಲಿಕಾರ್ಜುನನಪ್ಪಿರವ್ವಾ!"

ಇಲ್ಲಿಂದ ಮುಂದೆ ಆಕೆಯ ಜೀವನದಲ್ಲಿ ಮೂರನೆಯ ಘಟ್ಟ ಪ್ರಾರಂಭವಾಗುತ್ತದೆ. ಈ ಘಟ್ಟದಲ್ಲಿ ತನ್ನ ನಲ್ಲನಿಗಾಗಿ ಪಡುವ ವಿಪ್ರಲಂಭವೂ ಅವನ ದರ್ಶನಕ್ಕಾಗಿ ಅನುಭವಿಸುವ ಕಾತರ ಶೃಂಗಾರ ಚೇಷ್ಟೆಗಳೂ ವರ್ಣಿತವಾಗಿವೆ. ಇವುಗಳ ಪೂರ್ಣ ಸ್ವರೂಪವನ್ನು ಇಲ್ಲಿ ಸ್ವಲ್ಪ ವಿವರವಾಗಿ ನೋಡಬಹುದು.

ಅಕ್ಕನು ನಿಜವಾಗಿಯೂ "ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡುರೂಪು." ಆದುದರಿಂದಲೇ ಯಾರ ಸಹಾಯವೂ ಇಲ್ಲದೆ 'ಮನವೆಂಬ ಸಖಿಯ ಪ್ರಸಾದದಿಂದ ಅನುಭಾವವ ಕಲಿತಳು ಶಿವನೊಡನೆ.' ಇದು ನಿಜವಾಗಿಯೂ ಆಕೆಯ ಆಧ್ಯಾತ್ಮಿಕ ಜೀವನದ ಒಂದು ಅತ್ಯದ್ಭುತ ಸಾಹಸ. ಈ ಸಾಹಸದ ಮುಂದಣ ಕಥೆ ಬಹುಶಃ ಹೀಗೆ ನಡೆದಿರಬೇಕು. 'ಹರನೇ ನೀನೆನಗೆ ಗಂಡನಾಗಬೇಕೆಂದು' ಅನಂತಕಾಲ ಅಕ್ಕನು ತಪಸ್ಸು ಮಾಡಿದಳು. ಆ ತಪಸ್ಸಿನ ಪೂರ್ವಾರ್ಧ ಅವಳು ತನ್ನ ದೇಹಾಭಿಮಾನ, ಜೀವಾಭಿಮಾನ, ಅಹಂಕಾರ ಮಮಕಾರಗಳನ್ನು ನಾಶಗೊಳಿಸುವುದರಲ್ಲಿ ಕಳೆಯಿತು. ಇದರ ವಿವರ ಹಿಂದೆ ಸಾಕಷ್ಟು ಬಂದಿದೆ. ಮುಂದೆ ಅಕ್ಕ ತನ್ನ ಚನ್ನನನ್ನು ಒಲಿಸಿ ಕೊಳ್ಳಲು ಪಟ್ಟಪಾಡು ನೋಡತಕ್ಕದ್ದು.

"ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯ?
ನೀನು ಬಹಿರಂಗ ವ್ಯವಹಾರ ದೂರಸ್ಥನು ಅಯ್ಯ,
ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೆ ಅಯ್ಯ?
ನೀನು ವಾಙ್ಮನಾತೀತನು ಅಯ್ಯ,
ಜಪಸ್ತೋತ್ರದಿಂದೊಲಿಸುವೆನೆ ಅಯ್ಯಾ? ನೀನು ನಾದಾತೀತನು.
ಭಾವಜ್ಞಾನದಿಂದೊಲಿಸುವೆನೇ ಅಯ್ಯ? ನೀನು ಮತಿಗತೀತನು.
ಹೃದಯಕಮಲದಲ್ಲಿಂಬಿಟ್ಟುಕೊಂಬೆನೆ, ಅಯ್ಯಾ?
ನೀನು ಸರ್ವಾಂಗ ಪರಿಪೂರ್ಣನು. ಅಯ್ಯಾ ನಿನ್ನ ಒಲಿಸಲೆನ್ನಳವಲ್ಲ.
ನೀನೊಲಿವುದೇ ಸುಖವಯ್ಯ ಚನ್ನಮಲ್ಲಿಕಾರ್ಜುನಾ."

ಆದುದರಿಂದಲೇ ಅಕ್ಕನು ತನ್ನ ಅಸಹಾಯತೆಯನ್ನು ಒಪ್ಪಿಕೊಂಡು 'ನಿನ್ನ ಒಲಿಸಲಳವಲ್ಲ, ನೀನೊಲಿವುದೇ ಸುಖವಯ್ಯ!' ಎಂದು ಬೇಡಿಕೊಳ್ಳುತ್ತಾಳೆ; ಅಷ್ಟೇ ಅಲ್ಲ.

"ಭಕ್ತೆಯಾನಪ್ಪೆನೆ ಅಯ್ಯ? ಕರ್ತೃಭೃತ್ಯತ್ವವ ನಾನರಿಯೆ.
ಮಾಹೇಶ್ವರಿಯಾನಪ್ಪೆನೆ ಅಯ್ಯ? ವ್ರತನೇಮವ ನಾನರಿಯೆ.
ಪ್ರಸಾದಿಯಾನಪ್ಪೆನೆ ಅಯ್ಯ? ಅರ್ಪಿತಅನರ್ಪಿತವೆಂಬ ಭೇದವ ನಾನರಿಯೆ
ಪ್ರಾಣಲಿಂಗಿಯಾನಪ್ಪೆನೆ ಅಯ್ಯ? ಅನುಭಾವ ಗಮನವ ನಾನರಿಯೆ.
ಶರಣೆಯಾನಪ್ಪೆನೆ ಅಯ್ಯ? ಶರಣಸತಿ ಲಿಂಗಪತಿ ಎಂಬ ಭಾವವ ನಾನರಿಯೆ.
ಐಕ್ಯಳಾನಪ್ಪೆನೆ ಅಯ್ಯ? ಬೆರಸಿ ಭೇದವ ನಾನರಿಯೆ.
ಚನ್ನಮಲ್ಲಿಕಾರ್ಜುನಯ್ಯ ಷಟ್ಸ್ಥಲದಲ್ಲಿ ನಿಃಸ್ಥಲವಾಗಿಪ್ಪೆನು."

ಎಂದು ಅಕ್ಕನು ಭಕ್ತಿಮಾರ್ಗದ ಕಷ್ಟಗಳನ್ನು ವರ್ಣಿಸಿದ್ದಾಳೆ. ಅವಳಿಗೆ ಇರುವುದೆಂದರೆ ಒಂದೇ ಶಕ್ತಿ. ಅನನ್ಯಮನಸ್ಕಳಾಗಿ ಜಗದೀಶ್ವರನನ್ನು ಬೇಡಿಕೊಳ್ಳುವುದು. 'ನೀನೊಲಿದು ಕೊಂಡಾಡಿದರೆ, ಇರುಹೆ ರುದ್ರನಾಗದೆ ಹೇಳಯ್ಯ?' ಎಷ್ಟು ಒಲಿದು ಕೊಂಡಾಡಿದರೂ ಭಗವಂತನು ಭಕ್ತಪರಾಧೀನನಾಗುವುದು ಸ್ವಲ್ಪ ವಿಳಂಬವೇ ಆಗುವುದು. ಇದು ಸಹಜ. ಆದರೆ ಈ ವಿಳಂಬದ ಕಾಲವನ್ನು ಭಕ್ತರು ಸಹಿಸುವುದೆಂತು? ಅದು ಅವರಿಗೆ ಕಿಚ್ಚಿಲ್ಲದ ಬೇಗೆ. ಏರಿಲ್ಲದ ಗಾಯ. ಸುಖವಿಲ್ಲದ ಧಾವತಿ. ಇದರ ಪರಿಣಾಮವಾಗಿ ಅಕ್ಕನ ಮನ ತಳಕೆಳಗಾಯಿತು. ಸುಳಿದು ಬೀಸುವ ಗಾಳಿ ಉರಿಯಾಯಿತು. ಬೆಳುದಿಂಗಳು ಬಿಸಿಲಾಯಿತು. ಅಕ್ಕನ ಮಾತಿನಲ್ಲಿಯೇ ನಾವು ಅವಳ ಈ ಮಧುರಭಾವದ ರಸದ ಒರತೆಗಳನ್ನು ಸವಿಯಬೇಕು.

"ಎನ್ನ ಮನವ ಮಾರುಗೊಂಡನವ್ವಾ!
ಎನ್ನ ತನುವ ಸೂರೆಗೊಂಡನವ್ವಾ!
ಎನ್ನ ಸುಖವನೊಪ್ಪುಗೊಂಡನವ್ವಾ!
ಎನ್ನಿರವನಿಂಬುಗೊಂಡನವ್ವಾ!
ಚನ್ನಮಲ್ಲಿಕಾರ್ಜುನನ ಒಲುಮೆಯುವಳಾನು."

ಇಂತಹ ಒಲುಮೆವೆಣ್ಣು

"ಅರಿಸಿನವನೆ ಮಿಂದು, ಹೊಂದುಡಿಗೆಯನೆ ತೊಟ್ಟು
ದೇವಾಂಗವನುಟ್ಟು, ಪುರುಷ ಬಾರಾ!
ನಿನ್ನ ಬರವೆನ್ನಸುವಿನ ಬರವು ಬಾರಯ್ಯ!
ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು
ಬಟ್ಟೆಗಳ ನೋಡಿ ಬಾಯಾರುತ್ತಿಹೆನು."

ಎಂದು ಅಕ್ಕರೆಯಿಂದ ಕರೆದು ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ದಾರಿಗಳನ್ನು ನೋಡಿ ಬಾಯಾರುತ್ತಿರುವುದು ಸಹಜವಾನೆ! ಜೀವನದ ಒಂದೆರಡು ಅಮಾನುಷ ಮುಹೂರ್ತಗಳಲ್ಲಿ ಮಾತ್ರ ಹೀಗೆ ಅಕ್ಕ ಚನ್ನಮಲ್ಲಿಕಾರ್ಜುನನ ಹಂಬಲಿನಿಂದ ಬಾಯಾರಿದಳೆಂದಲ್ಲ. ಅವಳ ಈ ಶಿವಸಾಪೇಕ್ಷತ್ವದ ತೃಷೆ ಇಡೀ ಜೀವನವನ್ನೇ ರಸಮಯುವನ್ನಾಗಿ ಮಾಡಿತ್ತು. ಹಗಲೂ ಇರುಳೂ ಅವಳಿಗೆ ಇದೇ ಧ್ಯಾನ.

"ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ, ನೋಡಯ್ಯ.
ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿರ್ಪೆ, ನೋಡಯ್ಯ.
ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯಾ.
ಚನ್ನಮಲ್ಲಿಕಾರ್ಜುನಾ, ನಿಮ್ಮೊಲುಮೆ ನಟ್ಟು ಹಸಿವುತೃಷೆನಿದ್ರೆಯ
ಮರೆತೆನು."

"ಬಂದಹನೆಂದು ಬಟ್ಟೆಯ ನೋಡಿ
ಬಾರದಿರ್ದೊಡೆ ಕರಗಿ ಕೊರಗಿದೆನವ್ವಾ!
ತಡವಾದೊಡೆ ಬಡವಾದೆ, ತಾಯೆ."

ಹೀಗೆ ಅಕ್ಕ ಲಿಂಗದ ವಿಕಳಾವಸ್ಥೆಯಲ್ಲಿ ಕಡುಬಡವಾದಳು. ಬಡವಾಗುವುದು ಅವರ ಪಣೆಬರಹ. ಅಂದಮಾತ್ರಕ್ಕೆ ತನ್ನ ಇಷ್ಟದೈವವು ಕಣ್ತೆರೆಯಿತೆಂದು ಹೇಳಬಹುದೇ? ಅಕ್ಕನಿಗೆ ಗೊತ್ತು—

"ಅರಸಿ ತೊಳಲಿದರಿಲ್ಲ ಬಯಸಿ ಹೊಕ್ಕರಿಲ್ಲ
ತಪಸ್ಸುಮಾಡಿದರಿಲ್ಲ ಅದು ತನ್ನ ಬಹ ಕಾಲಕ್ಕಲ್ಲದೆ
ಸಾಧ್ಯವಾಗದು ಶಿವನೊಲಿದಲ್ಲದೆ ಕೈಗೂಡದು."

ಕೈಗೂಡುವವರೆಗೆ ತ್ರಿಕರಣ ಪೂರ್ವಕವಾಗಿ ತನ್ನ ಸರ್ವಸ್ವವನ್ನೂ ಪರಮಾತ್ಮನಲ್ಲಿ ನಿವೇದಿಸಿ ಆತನನ್ನೇ ನೆನೆಯಬೇಕು. ಅಕ್ಕ ಇಂಥಾ ಸಾಧನೆ ಮಾಡುತ್ತಿದ್ದಳು. ಪರವಸ್ತುವಿನ ಕಡೆಗೆ ಮಧುರ ಭಾವದಿಂದ ಆರ್ದ್ರಹೃದಯಳಾಗಿ ನೋಡುತ್ತಿದ್ದಳು. ಆತನೇ ತನ್ನ ಜೀವ ಸರ್ವಸ್ವ, ಆತನೇ ತನ್ನ ಮುಕ್ತಿ ಬಂಧು ಎಂದು ಅವಿರಳಮನಸ್ಕಳಾಗಿ ಬೇಡುತ್ತಿದ್ದಳು, ಅಂಗಲಾಚುತ್ತಿದ್ದಳು.

"ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ
ಸಲುಗುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ ಬಳಲುಗೆ ಮನ ನಿಮ್ಮಲ್ಲಿ
ಕರಗುಗೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ
ಎನ್ನ ಪಂಚೇಂದ್ರಿಯಂಗಳು ಕಬ್ಬುನ ಉಂಡನೀರಿನಂತೆ
ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ."

ಹೀಗೆ ಏಕನಿಷ್ಠೆಯಿಂದ ಪರಮಾತ್ಮನನ್ನು ಧ್ಯಾನಿಸುವುದೇ ಒಂದು ಸಾಧನೆ. ತನ್ನ ಪಂಚೇಂದ್ರಿಯಂಗಳೂ ಆತನ ಚಿರಂತನ ಧ್ಯಾನದಲ್ಲಿ ಲೀನವಾಗುವುದೇ ಒಂದು ಯೋಗ. ಇದಕ್ಕೆ ಮುಖ್ಯವಾಗಿ ಮನಸ್ಸು ನೂರಾರು ಕಡೆ ಹರಿದುಹೋಗದೆ ಒಂದೇ ಕಡೆ ನೆಲಸಬೇಕಾಗುತ್ತದೆ. ಇಂತಹ ಚಿತ್ತದಲ್ಲಿ ಏಕಾಗ್ರತೆಯನ್ನು ಅಕ್ಕ ಸಾಧಿಸಿಕೊಂಡಿದ್ದಳು.

" ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ.
ಎನಗುಳ್ಳುದೊಂದು ಮನ ಆ ಮನ ನಿಮ್ಮಲ್ಲಿ.
ಒಡವೆರೆದ ಬಳಿಕ ಎನಗೆ ಭವ ಉಂಟೆ ಚನ್ನಮಲ್ಲಿಕಾರ್ಜುನಾ ?

ಹೀಗೆಂದು ಅಕ್ಕ ಅತ್ತಲಿತ್ತ ಹರಿವ ಮನದ ಶಿರವನ್ನು ಕತ್ತರಿಸಿ ಧ್ಯಾನಮಗ್ನಳಾದಳು.

" ಉದಯದಲೆದ್ದು ನಿಮ್ಮ ನೆನೆವೆನಯ್ಯ.
ನಿಮ್ಮ ಬರವ ಹಾರುತ್ತಿರ್ಪೆನಯ್ಯ :
ಹಸೆಹಂದರವನಿಕ್ಕಿ ನಿಮ್ಮಡಿಗಳಿಗೆ ಎಡೆ ಮಾಡಿಕೊಂಡಿಪ್ಪೆನಯ್ಯಾ
ಚನ್ನಮಲ್ಲಿಕಾರ್ಜುನಾ, ನೀನಾವಾಗ ಬಂದಿಹೆ ಎಂದು."

ಹಿಂಡನ್ನು ಅಗಲಿ ಹಿಡಿವಡೆದ ಕುಂಜರವು ತನ್ನ ವಿಂಧ್ಯವನ್ನು ನೆನೆಯುವಂತೆ ಬಂಧನಕ್ಕೆ ಬಂದ ಗಿಳಿಯು ತನ್ನ ಬಂಧುವನ್ನು ನೆನೆಯುವಂತೆ ಚನ್ನಮಲ್ಲಿಕಾರ್ಜುನನನ್ನು ಅಕ್ಕ ನೆನೆನೆನೆದು ಹಂಬಲಿಸುತ್ತಿದ್ದಳು. ಈ ಹಂಬಲದ ಉದ್ದೇಶ, ಆ ದೊರೆ ಈ ರಾಣಿಯನ್ನು " ಕಂದ ನೀನಿತ್ತ ಬಾ " ಎಂದು ಕರೆಯಬೇಕೆಂದು. ಈ ಕರೆ ಆ ದೊರೆಯನ್ನು ಮುಟ್ಟಿತೋ ಇಲ್ಲವೋ ! ಇಲ್ಲದಿದ್ದರೆ ಹೀಗೆ ವಿಮುಖನಾಗುವನೆ ? ಅಕ್ಕ ಆದರೂ ಹೆದರಲಿಲ್ಲ.

" ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು
ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ ನೀನೊಲಿದರೆ ಒಲಿ, ಒಲಿಯದಿರ್ದೊಡೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ !
ಅಯ್ಯಾ ನೀ ಮಚ್ಚಿದರೆ ಮಚ್ಚು, ಮಚ್ಚದಿರ್ದೊಡೆ ಮಾಣು
ನಾ ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯ !
ಅಯ್ಯ ನೀ ನೋಡಿದೊಡೆ ನೋಡು, ನೋಡದಿರ್ದೊಡೆ ಮಾಣು
ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯ !
ಚನ್ನಮಲ್ಲಿಕಾರ್ಜುನಯ್ಯ ನಾ ನಿಮ್ಮ ಪೂಜಿಸಿ
ಹರುಷದೊಳೋಲಾಡುವೆನಯ್ಯ."

ಇದು ಭಾವಸಮಾಧಿಯಲ್ಲಿ ನಿಮಗ್ನಳಾದ ಅಕ್ಕನ ಕರ್ತವ್ಯ ನಿಷ್ಠೆಯ ಒಂದು ಮುಖ. ಈ ಮುಖಕ್ಕೆ ಚನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ ಒಂದು ಹೊಂಗನಸಿನಂತೆ ಲಭಿಸಿರಬೇಕು. ಇದರ ಚಿತ್ರ ಈ ಮಾತುಗಳಲ್ಲಿ ಕಾಣುತ್ತದೆ.

"ಹೊಳೆವ ಜಡೆಯಮೇಲೆ ಎಳೆವೆಳದಿಂಗಳು
ಫಣಿಮಣಿ ಕರ್ಣಕುಂಡಲದವ ನೋಡವ್ವ !
ರುಂಡಮಾಲೆಯ ಕೊರಳವನ ಕಂಡರೆ ಒಮ್ಮೆ ಬರಹೇಳವ್ವಾ !
ಗೋವಿಂದನ ನಯನ ಉಂಗುಟದಮೇಲಿಪ್ಪುದು
ಚನ್ನಮಲ್ಲಿಕಾರ್ಜುನದೇವ, ನಿನ್ನ ಕುರುಹವ್ವಾ !

ಕುರುಹು ಸಿಕ್ಕಿದ ಮೇಲೆ ಕನಸುಕಾಣುವುದು ಕಷ್ಟವಲ್ಲ. ಎಲ್ಲ ಅನುಭಾವಿಗಳಿಗೆ ಇದರ ಅನುಭವವಿದೆ. ಅವರವರ ಜೀವನದಲ್ಲಿ ಅವರವರ ಧ್ಯಾನಮೂರ್ತಿ ಎಂದಿಗಾದರೊಮ್ಮೆ ಕನಸಿನಲ್ಲಿ ಗೋಚರವಾಗಿ ಅಭಯನೀಡುವುದುಂಟು. ಅಕ್ಕನಿಗೂ ಇಂತಹ ದಿವ್ಯಾನುಭವ ಉಂಟಾಯಿತು.

"ಅಕ್ಕ ಕೇಳವ್ವ, ಅಕ್ಕಯ್ಯ ! ನಾನೊಂದ ಕನಸ ಕಂಡೆ.
ಅಕ್ಕಿಯಡಕೆ ತೆಂಗಿನಕಾಯ ಕಂಡೆ.
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಬಂದುದ ಕಂಡೆನವ್ವ.
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು
ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.

ಈಗ ಅಕ್ಕನಿಗೆ ಧೈರ್ಯವಾಯಿತು. ಬರೆದ ಪತ್ರಕ್ಕೆ ರುಜು ಮಾಡಿದಂತೆ ಚನ್ನಮಲ್ಲಿಕಾರ್ಜುನ ಈಕೆಯ ಒಲುಮೆಯ ಪತ್ರಕ್ಕೆ ರುಜುಹಾಕಿ ಹೋದನು. ಅಕ್ಕನ ಬದುಕು ಸಾರ್ಥಕವಾಯಿತು. "ನಾ ನಿನಗೊಲಿದೆ, ನೀನು ಎನಗೊಲಿದೆ, ನೀನೆನ್ನನಗಲಿದಿಪ್ಪೆ, ನಾನಿನ್ನಗಲದಿಪ್ಪೆನಯ್ಯ." ಅಕ್ಕನಿಗೆ ಇನ್ನು ಜೀವನದಲ್ಲಿ ಎಲ್ಲಿಲ್ಲದ

ಉತ್ಸಾಹ, ಎಲ್ಲೆ ಇಲ್ಲದ ಆನಂದ. ತನ್ನ ಈ ಆನಂದದಲ್ಲಿ ಎಲ್ಲರೂ ಭಾಗಿಗಳಾಗಬೇಕೆಂದು ಅವಳ ಆಸೆ.

" ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವಾ
ನಿಮನಿಮಗೆಲ್ಲಾ ಶೃಂಗಾರವ ಮಾಡಿಕೊಳ್ಳಿ
ಚನ್ನಮಲ್ಲಿಕಾರ್ಜುನನೀಗಳೆ ಬಂದಿಹನು
ಇದಿರುಗೊಳ್ಳಬನ್ನಿರೆ ಅವ್ವಗಳಿರಾ."

ಎಂದು ಆನಂದದ ಭರದಲ್ಲಿ ಹಿಗ್ಗಿಹೋದಳು. ಇಲ್ಲಿಗೆ ಅವಳ ಚರಿತ್ರೆಯಲ್ಲಿ ಮೂರನೆಯ ಘಟ್ಟ ಮುಗಿಯುತ್ತದೆ.

೪

" ಆಡುವುದು, ಪಾಡುವುದು ಕೇಳುವುದು, ಹೇಳುವುದು, ನಡೆವುದು,
ನುಡಿವುದು, ಸರಸಸಮ್ಮೇಳವಾಗಿಪ್ಪುದಯ್ಯಾ ಶರಣರೊಡನೆ.
ಚನ್ನಮಲ್ಲಿಕಾರ್ಜುನಯ್ಯ, ನೀ ಕೊಟ್ಟ ಆಯುಷ್ಯವುಳ್ಳನಕ್ಕರ
ಲಿಂಗ ಸುಖಿಗಳ ಸಂಗದಲ್ಲಿ ದಿನಂಗಳ ಕಳೆವೆನು."

ನಾಲ್ಕನೆಯ ಘಟ್ಟ ಅಕ್ಕ ಕಲ್ಯಾಣಕ್ಕೆ ಹೋಗಿ ಶಿವಶರಣರ ಗೋಷ್ಠಿ ನೆರೆದ ಶಿವಾನುಭವಮಂಟಪದಲ್ಲಿ ತನ್ನ ಅನುಭಾವ ವಿದ್ಯೆಯನ್ನು ಬೀರಿ ಪ್ರತಿಯಾಗಿ ಬಸವ ಪ್ರಭುದೇವಾದಿ ಹಿರಿಯರಿಂದ ಗೂಢ ತತ್ತ್ವೋಪದೇಶಗಳನ್ನು ಪಡೆದಲ್ಲಿಯವರೆಗಿನ ಕಥೆಯಾಗುತ್ತದೆ.

ಅಕ್ಕ ಕಲ್ಯಾಣ ಪಟ್ಟಣಕ್ಕೆ ಹೋಗಿ ಅಲ್ಲಿ ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮಾದಿ ಶಿವಶರಣರ ಸಂಗ ಸಹವಾಸದಲ್ಲಿ ಕೆಲ ಕಾಲವಿದ್ದು ಅವರಿಂದ ಅನೇಕ ವಿಷಯಗಳನ್ನು ಅರಿತುಕೊಂಡಳು. ಮುಖ್ಯವಾಗಿ ಬಸವ ಮತ್ತು ಅಲ್ಲಮರಿಂದ ಅವಳು ಮಹತ್ವದ ಸಂಗತಿಗಳನ್ನು ತಿಳಿದುಕೊಂಡಳು. ಬಸವಣ್ಣನನ್ನು ತನ್ನ ಗುರು ಎಂದು ಅಕ್ಕ ಅನೇಕ ಕಡೆ ಸಂಬೋಧಿಸಿದ್ದಾಳೆ. ಆತನನ್ನು ಮುಕ್ತ

ಕಂಠೆಯಾಗಿ ಹೊಗಳಿದ್ದಾಳೆ. "ತ್ರಿವಿಧ ಲಿಂಗಾಂಗ ಸಂಬಂಧಿ, ಅನ್ಯ ದೈವಸ್ಮರಣೆಯ ಹೊದ್ದ, ಭವಿಸಂಗವ ಮಾಡ, ಭವಿ ಪಾಕವ ಕೊಳ್ಳ, ಪರಸ್ತ್ರೀಯರ ಬೆರಸ, ಪರಧನವನೊಲ್ಲ, ಪರನಿಂದೆಯನಾಡ ಅನೃತವ ನುಡಿಯ" ಇತ್ಯಾದಿಯಾಗಿ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆಯುವ "ಆ ಬಸವಣ್ಣನ ಶ್ರೀಪಾದಕ್ಕೆ ನಾನು ಅಹೋರಾತ್ರೆಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನಮಲ್ಲಿಕಾರ್ಜುನಾ" ಎಂದು ಅಕ್ಕ ಬಸವಣ್ಣನ ಗುಣವನ್ನು ಕೊಂಡಾಡಿ ಆತನ ಪರಮ ಭಕ್ತೆಯಾಗಿ ಅವನಿಂದ ತತ್ತ್ವೋಪದೇಶ ವನ್ನು ಪಡೆದಳು.

ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು
ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು
ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು
ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು

ಕಾಮನ ಗೆಲಿದೆನು ಬಸವಾ ನಿಮ್ಮ ದಯೆಯಿಂದ
ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ
ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು ಭಾವಿಸಲು ಗಂಡುರೂಪು
ಬಸವಾ ನಿಮ್ಮ ದಯೆಯಿಂದ ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ
ತೊಡರನಿಕ್ಕಿ ಎರಡು ಅರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ.

ಕಲ್ಯಾಣದಲ್ಲಿ ಇದ್ದಷ್ಟು ದಿವಸವೂ ಅಕ್ಕ ಬಸವಣ್ಣನ ಮಹಾ ಮನೆಯಲ್ಲಿ ಆತನ ಕರುಣೆಯ ಕಂದನೆಂಬಂತೆ ಬಾಳಿದಳು. ಬಸವಣ್ಣನೂ ಆಕೆಯಲ್ಲಿ ವಿಶೇಷ ಪ್ರೀತ್ಯಾದರಗಳನ್ನೂ ಭಕ್ತಿ ಗೌರವಗಳನ್ನೂ ಪ್ರಕಟಿಸಿ ಶಿವಸಾಪೇಕ್ಷತ್ವಕ್ಕೆ ಅತಿ ಸುಲಭವೂ ಸರಳವೂ ಆದ ಭಕ್ತಿಮಾರ್ಗವನ್ನು ಆಕೆಗೆ ಉಪದೇಶಿಸಿದನು.

ಬಸವಣ್ಣನಿಂದ ಭಕ್ತಿಯ ಸಂಪ್ರದಾಯವನ್ನು ಅರಿತು ಕೊಂಡಂತೆ ಅಲ್ಲಮಪ್ರಭುವಿನಿಂದ ಅಕ್ಕನು ಜ್ಞಾನಮಾರ್ಗವನ್ನು

ಅರಿತುಕೊಂಡಳು. ಕಲ್ಯಾಣ ಪಟ್ಟಣಕ್ಕೆ ಹೋದ ಮೊದಲಿನಲ್ಲಿ ಅಲ್ಲಿ ನೆರೆದ ಶಿವಾನುಭವಮಂಟಪದ ಶರಣ ಸಂದೋಹದಲ್ಲಿ ಅಕ್ಕನಿಗೂ ಅಲ್ಲಮನಿಗೂ ಭಕ್ತಿ, ಜ್ಞಾನ, ವೈರಾಗ್ಯಗಳ ವಿಷಯದಲ್ಲಿ ವಾದ ನಡೆಯಿತು ಎಂದು "ಶೂನ್ಯಸಂಪಾದನೆ" ಎನ್ನುವ ಗ್ರಂಥದಲ್ಲಿ ಬರೆದಿದೆ. ಅಕ್ಕ ಅಲ್ಲಮರ ವಾದವನ್ನು ಅವರವರ ವಚನಗಳಿಂದಲೇ ಸುವಾದ ರೂಪದಲ್ಲಿ ಅಳವಡಿಸಿ ಅಕ್ಕನ ಚರಿತ್ರೆಯನ್ನು ಶೂನ್ಯ ಸಂಪಾದನಕಾರರು ಹೇಳಿರುವುದರಿಂದ ನೀರಸವಾದ ತತ್ವಪ್ರತಿಪಾದನೆಯು ಈ ಭಾಗ ಅಲ್ಲಿ ಪೆಚ್ಚಿನ ಮೆರುಗಿನಿಂದ ಶೋಭಿಸುತ್ತಿದೆ. ಅಲ್ಲಿ ಬರುವ ಅಕ್ಕ ಮತ್ತು ಅಲ್ಲಮರ ಸಂವಾದದ ಕೆಲವೊಂದು ಭಾಗವನ್ನು ಮಾತ್ರ ಇಲ್ಲಿ ಎತ್ತಿಕೊಟ್ಟಿದೆ.

ಅಲ್ಲಮ:—ಸತಿ ನೀನು ಇತ್ತಲೇತಕ್ಕೆ ಬಂದೆಯವ್ವಾ. ಸತಿಯೆಂದರೆ ಮುನಿವರು ಎಮ್ಮ ಶರಣರು. ನಿನ್ನ ಪತಿಯು ಕುರುಹ ಹೇಳಿದರೆ ಬಂದು ಕುಳ್ಳಿರು, ಇಲ್ಲದಿದ್ದರೆ ತೊಲಗು ತಾಯೆ. ನಮ್ಮ ಗುಹೇಶ್ವರನ ಶರಣರಲ್ಲಿ ಸಂಗ ಸುಖ ಸನ್ನಿಹಿತವ ಬಯಸುವರೆ ನಿನ್ನ ಪತಿ ಯಾರೆಂಬುದ ಹೇಳಿ ಎಲೆ ಅವ್ವಾ.

ಅಕ್ಕ :—ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ. ಹಸೆಯ ಮೇಲಣಮಾತು ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರ ಕಳುಹಿದರೆಮ್ಮವರು.

ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ, ನಾನೇ ಮದುವಳಿಗೆಯಾದೆನು..................ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೇ.

ಅಲ್ಲಮ :—ತಪ್ಪಹೊರಿಸಿ ಹೊರಟೆನೆಂಬುದು ಸತ್ಯವೆ? ತನು ಸಿರಿಯುನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯು

ವಾಗದು. ಕೇಶವೆಂಬ ಸೀರೆಯೇ ಅಂಗಕ್ಕೆ ಮರೆಯಾಯಿತ್ತು. ಅಪವ ರಾನವೆಂತು ಹರಿಯಿತ್ತು ? ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ.

ಅಕ್ಕ:—ಕಾಯ ಕರ್ರನೆ ಕಂದಿದರೇನಯ್ಯ. ಕಾಯ ಮಿರ್ರನೆ ಮಿಂಚಿದರೇನಯ್ಯ. ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿ ಕಾರ್ಜುನಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ ?

ಅಲ್ಲಮ :—ದೇವನೊಲಿಯದೆ ನೀನೊಲಿಸಿದೆನೆಂಬುದು ಅದಾವುದಕ್ಕೆ ? ಭಾವ ಶುದ್ಧವಾದಲ್ಲಿ ಸೀರೆಯನುಳಿದು ಕೂದಲ ಮರೆ ಮಾಡುವುದೇತಕ್ಕೆ? ಅದು ಅಂತರಂಗದ ನಾಚಿಕೆ ; ಬಾಹ್ಯದಲ್ಲಿ ತೋರಿತ್ತು. ಇದು ಗುಹೇಶ್ವರ ಲಿಂಗಕ್ಕೆ ಒಲವರವಲ್ಲ.

ಅಕ್ಕ:—ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆ ಭಾವದಿಂದ ಮುಚ್ಚಿದೆ.

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೆ ಲೇಸು ಕಂಡಯ್ಯ. ಕಾಯದ ಸಂಗವ ವಿವರಿಸ ಬಲ್ಲಡೆ ಕಾಯದ ಸಂಗವೆ ಲೇಸು ಕಂಡಯ್ಯ. ತಾಯಿ ರಕ್ಕಸಿಯಾದಂತೆ ಕಾಯವಿಕಾರವು. ಚನ್ನಮಲ್ಲಿಕಾರ್ಜುನಯ್ಯಾ, ನೀನೊಲಿದವರು ಕಾಯಗೊಂಡಿದ್ದರೆನಬೇಡ.

ಅಲ್ಲಮ:—ತನುಗುಣ ವಿವರಿಸಿಹೆನೆಂದರೆ ಮನ ಶುದ್ಧವಾಗ ಬೇಕು. ಮನ ಗುಣ ವಿವರಿಸಿಹೆನೆಂದರೆ ಇಂದ್ರಿಯ ಶುದ್ಧವಾಗ ಬೇಕು. ತನು ಮನ ಇಂದ್ರಿಯಂಗಳು ಶುದ್ಧಸುಯಿಧಾನವಾಗಿ ಲಿಂಗಮುಖಕ್ಕೆ ವೇದ್ಯವಾದಲ್ಲದೆ ಗುಹೇಶ್ವರಲಿಂಗವ ಬೆಸಗೊಳ ಬಾರದು ಕೇಳಾ, ತಾಯೆ.

ಅಕ್ಕ :—ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದಕೊಂಡು. ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು. ಎನ್ನ ಕಂಗಳು ಶುದ್ಧವಾಯಿತ್ತು ಸಕಲ ಪುರಾತನರ ನೋಡಿ. ಎನ್ನ

ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯು ಕೇಳಿ. ಎನ್ನ ಭಾವನೆಯುನಗಿದು ಜೀವನವು ಕೇಳಾ, ಲಿಂಗತಂದೆ, ನೆಟ್ಟನೆ ನಿಮ್ಮೊಮ್ಮವ ಪೂಜಿಸಿ ಭವಗೆಟ್ಟೆ ಕಾಣಾ, ಚನ್ನಮಲ್ಲಿಕಾರ್ಜುನಾ.

ಅಲ್ಲಮ :—ಕಾಯಂ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಜೀವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಭಾವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಗುಹೇಶ್ವರ ಲಿಂಗವಲ್ಲಿ ಶುದ್ಧಸುಯಿಧಾನಿಯಾದೆನೆಂದರೆ ನಿಜವು ಸಾಧ್ಯವಾಗದು ಕೇಳಾ ಅವ್ವಾ.

ಅಕ್ಕ :—ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನನೆನಹಾಯಿತ್ತು. ಎನ್ನ ತಲೆವೊಲೆಗಳ ನೋಡಿ ಸಲಹಿದಿರಾಗಿ ಚನ್ನಮಲ್ಲಿಕಾರ್ಜುನನ ಧರ್ಮದವಳು.

ಅಲ್ಲಮ :—ಕೂಡಲಿಲ್ಲದ ಘನವ ಕೂಡುವ ಪರಿ ಎಂತವ್ವ ? ಹೇಳಿದರೆ ಅದಕ್ಕದೆ ಕೊರತೆ, ಗುಹೇಶ್ವರ ಲಿಂಗವ ಬೇರೆಮಾಡಿ ಬೆರಸುವ ಪರಿ ಎಂತು ಹೇಳಾ?

ಅಕ್ಕ :—ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಭೇದ ಉಂಟೆ ಅಯ್ಯ? ದೀಪಕ್ಕೆ ದೀಪ್ತಿಗೆ ಭೇದ ಉಂಟೆ ಅಯ್ಯ? ಆತ್ಮಕ್ಕೆ ಅಂಗಕ್ಕೆ ಭೇದ ಉಂಟೆ ಅಯ್ಯ ? ಎನ್ನ ಅಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ ಸಾವಯಕ್ಕೆ ನಿರವಯಕ್ಕೆ ಭೇದವಿಲ್ಲವಯ್ಯ. ಚನ್ನಮಲ್ಲಿಕಾರ್ಜುನನೇ ವರಿಸಿ ಬೆರಸಿ ಮತಿಗೆಟ್ಟವಳನೇತಕ್ಕೆ ನುಡಿಸುವಿರಯ್ಯ ಪ್ರಭುವೆ?

ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು. ಮನವ ಅರಿವಿಂಗರ್ಪಿಸಿ ಮನ ಲೀಯ್ಯವಾಯಿತ್ತು. ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು. ಅಂಗ ಮನ ಭಾವವಳಿದ

ಕಾರಣ ಕಾಯ ಅಕಾಯವಾಯಿತ್ತು. ಎನ್ನ ಕಾಯದ ಸುಖದ ಭೋಗವ ಲಿಂಗವೇ ಭೋಗಿಸುವುದಾಗಿ ಶರಣ ಸತಿ ಲಿಂಗ ಪತಿಯಾದೆನು. ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು.

ಅಲ್ಲಮ :—ನಾ ಸತ್ತೆನೆಂದು ಹೆಣ ಕೂಗಿದುದುಂಟೆ? ಬಯ್ಚಿಟ್ಟ ಬಯಕೆ ಕರೆದುದುಂಟೆ? ಹೆಪ್ಪಿಟ್ಟ ಹಾಲು ಸಿಹಿಯಪ್ಪುದೆ? ಈ ಮಾತು ಒಪ್ಪುವಪ್ಪುದೇ, ಗುಹೇಶ್ವರಲಿಂಗಕ್ಕೆ ?

ಅಕ್ಕ :—ಸತ್ತ ಹೆಣ ಕೂಗಿದುದುಂಟು. ಬಯ್ಚಿಟ್ಟ ಬಯಕೆ ಕರೆದುದುಂಟು. ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು. ಇದ ನಿಶ್ಚೈಸಿ ನೋಡಿ ಚೆನ್ನಮಲ್ಲಿಕಾರ್ಜುನ ದೇವರಲ್ಲಿ.

ಅಲ್ಲಮ:—ಇದು ಎನಗೆ ಆಶ್ಚರ್ಯ, ಹೇಳವ್ವಾ ಕಾಯವಿಲ್ಲದ ಸುಖವ, ಜೀವವಿಲ್ಲದ ಭಾವವ, ಆ ಠಾವ ಹೇಳಾ ಗುಹೇಶ್ವರ ಲಿಂಗಕ್ಕೆ.

ಅಕ್ಕ:—ಮರೆದೊರಗಿ ಕನಸಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ಋಣನಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟ ಹಾಲು ಗಟ್ಟಿದುಪ್ಪವಾಗಿ ಸಿಹಿಯಾಯಿತ್ತು. ಇದಕ್ಕೆ ತಪ್ಪ ಸಾಧಿಸಲೇಕೆ ಚೆನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ?

ಅಕ್ಕ ಅಲ್ಲಮರ ವಾದ ಹೀಗೆಯೇ ಕೊನೆಗೊಂಡಿತು, ಇಷ್ಟೇ ನಡೆಯಿತು ಎಂದಲ್ಲ ; ಮುಖ್ಯವಾಗಿ ಆಗಿನ ಕಾಲದಲ್ಲಿ ಹಿರಿಯ ಅನುಭಾವಿಗಳ ನಡುವೆ ವಾದವಿವಾದಗಳು ಹೇಗೆ ನಡೆಯುತ್ತಿದ್ದುವು ಎಂಬುದನ್ನೂ ಅವು ಎಷ್ಟು ಉದ್ಬೋಧಕವೂ ತತ್ವ ಪ್ರಭಾವಯುತವೂ ಆಗಿರುತ್ತಿದ್ದುವು ಎಂಬುದನ್ನೂ ನಾವಿಲ್ಲಿ ಕಂಡುಕೊಳ್ಳಬಹುದು. ಅಕ್ಕನೇ ಹೇಳಿದಂತೆ "ಮರಮರ

ಮಥನಿಸಿ ಕಿಚ್ಚುಹುಟ್ಟಿ ಸುತ್ತಣ ತರುಮರಾದಿಗಳ ಸುಡ ಲಾಯಿತ್ತು. ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ, ತನು ಗುಣಾದಿಗಳ ಸುಡಲಾಯಿತ್ತು." ಶಿವಾನುಭವ ಮಂಟಪದ ಶಿವಶರಣರ ಗೋಷ್ಠಿಯಲ್ಲಿ ಅಕ್ಕನು ತನ್ನ ಹೃದಯ ಸಮುದ್ರ ವನ್ನು ಮಥನಿಸಿ ಅಂತರಾತ್ಮನನ್ನು ಸಾಧಿಸುವ ಅನುಭವಾಮೃತ ವನ್ನು ಪಡೆದಳು. "ವಾದೇ ವಾದೇ ಜಾಯತೇ ತತ್ವಬೋಧಃ" ಎನ್ನುವ ಮಾತು ಇಂತಹ ವಾದಕ್ಕೆ ಸರಿಯಾಗಿ ಅನ್ವಯಿಸುತ್ತದೆ. ಸಂಗದಿಂದ ಅಗ್ನಿ, ಸಂಗದಿಂದ ಅಂಕುರ, ಸಂಗದಿಂದ ದೇಹ ಹುಟ್ಟುವುದು ಸಹಜವಿರುವಂತೆ ಸಂಗದಿಂದ "ಆತ್ಮಮಥನ"ವೂ ಅದರಿಂದ ಅನುಭಾವವೂ ಅದರಿಂದ ಲಿಂಗಾಂಗಸಾಮರಸ್ಯವೂ ಹುಟ್ಟುವುದು ವಾಸ್ತವ ; ಸಹಜ ಸತ್ಯ. ಈ ಸತ್ಯದ ಸಾಕ್ಷಾತ್ಕಾರ ಅಕ್ಕನಿಗೆ ಶರಣರ ಸಂಗದಿಂದ ಸಿದ್ಧಿಸಿತು.

ಅಕ್ಕನ ನಿರ್ಮಲವಾದ ಶೀಲಚಾರಿತ್ರವನ್ನೂ ಆಧ್ಯಾತ್ಮಿಕ ಜೀವನ ವನ್ನೂ ಕಂಡು ಕಲ್ಯಾಣದ ಶರಣರೆಲ್ಲರೂ ಆಕೆಯನ್ನು ವಿಶೇಷ ವಾಗಿ ಗೌರವಿಸಿದರು. "ಅಂಗನೆ ಅಂಗನೆಯ ರೂಪಲ್ಲದೆ ಮನ ವಸ್ತು ಭಾವದಲ್ಲಿ ಬೆಚ್ಚಂತೆ ಇಪ್ಪುದು. ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲ. ಅಕ್ಕ ಗುಹೇಶ್ವರ ಲಿಂಗದಲ್ಲಿ ಉಭಯನಾಸ್ತಿ ಮನವಳಿದೆ, ಎನ್ನಕ್ಕಾ !" ಎಂದು ಅಲ್ಲಮಪ್ರಭುದೇವರು ಅಕ್ಕನನ್ನು ಕೊಂಡಾಡಿದರು. "ಹೆಂಗುಸಿನಂಗವ ನೋಡಿರೆ ಪುರಾತನರು, ಬಾಲತನದಂಗವ ನೋಡಿರೆ ಪುರಾತನರು, ಬ್ರಹ್ಮವ ನಾಚರಿಸಿ ತನ್ನ ಮರೆದಿಪ್ಪುದ ನೋಡಿರೆ ಲಿಂಗವಂತರು, ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆ ಇಪ್ಪ ಇರವು ಕೂಡಲ ಸಂಗಮದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು" ಎಂದು ಬಸವಣ್ಣನವರು ಹೊಗಳಿದರು. "ಅಜಕೋಟಿ ವರುಷ

ದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ? ನಡು ಮುರಿದು ಗುಡಗೂರಿ ತಲೆನಡುಗಿ ನರೆತೆರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ? ಅನುವರಿದು ಘನವ ತಿರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು" ಎಂದು ಚೆನ್ನಬಸವಣ್ಣನವರು ಅಕ್ಕನನ್ನು ಸ್ತೋತ್ರ ಮಾಡಿದರು.

ಹೀಗೆ ಎಲ್ಲ ಶರಣರ ಮೆಚ್ಚಿಕೆಗೆ ಪಾತ್ರಳಾಗಿ ಅವರೆಲ್ಲರ ದಿನ ದಿನದ ಶಿವಾನುಭವಸಂಬಂಧವಾದ ಆಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗಿಯಾಗಿ ಅಕ್ಕ ಬರಬರುತ್ತ ಸಂಪೂರ್ಣವಾಗಿ ಲಿಂಗಾಂಗ ಸಾಮರಸ್ಯಜ್ಞಾನದ ರಹಸ್ಯವನ್ನು ಅರಿತುಕೊಂಡಳು ; ಸ್ವಸ್ವರೂಪ ಜ್ಞಾನವನ್ನು ಪಡೆದುಕೊಂಡಳು. "ಅದ್ವೈತದಿಂದ ತನ್ನ ತಾನರಿದು ತಾನಾದರೆ ಚನ್ನಮಲ್ಲಿಕಾರ್ಜುನಲಿಂಗ ತಾನೆ ಬೇರಿಲ್ಲ," ಎನ್ನುವ ಭಾವ ಅವಳಲ್ಲಿ ಬಲಿಯಿತು. " ಎಲ್ಲ ಎಲ್ಲವನರಿದು ಫಲವೇನಯ್ಯ ತನ್ನ ತಾನರಿಯಬೇಕಲ್ಲದೆ ? " ಎನ್ನುವುದರ ಅರಿವಾಯಿತು. " ತನ್ನಲ್ಲಿದ್ದುದ ತಾನರಿಯದನ್ನಕ್ಕ ಹೇಳಿದೊಡೇನು? ಕೇಳಿದೊಡೇನು? " ತನ್ನಲ್ಲಿದ್ದುದು " ಅಪಾರ ಮಹಿಮ ಚನ್ನ ಮಲ್ಲಿಕಾರ್ಜುನ " ಎನ್ನುವ ಅಂಶ ಮನವರಿಕೆಯಾಯಿತು.

ಅಯ್ಯ, ದೂರದಲಿರ್ದಿಹೆ ಎಂದು ಬಾಯಾರಿ ಬಳಲುತಿರ್ದೆನಯ್ಯ, ನಾನು
ಅಯ್ಯ, ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ
ಇನ್ನು ರತಿ ಎಲ್ಲವೂ ಲಿಂಗ. ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ
ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನನ್ನ ಕರಸ್ಥಲದಲ್ಲಿ
ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯಾ.

ತನ್ನ ಹೃದಯದಲ್ಲಿಯೇ ನೆಲಸಿದ್ದ ಪರಮಾತ್ಮನನ್ನು ತಾನು ಅರಿತಮೇಲೆ ಆತನ ವಿಷಯವಾಗಿ ಅಕ್ಕ ಹೀಗೆ ಹಾಡಿಕೊಂಡಳು.

"ನೆಲದ ಮರೆಯು ನಿಧಾನದಂತೆ
ಫಲದ ಮರೆಯು ರುಚಿಯಂತೆ
ಸಿಲೆಯು ಮರೆಯು ಹೇಮದಂತೆ
ತಿಲದ ಮರೆಯು ತೈಲದಂತೆ
ಭಾವದ ಮರೆಯು ಬ್ರಹ್ಮವಾಗಿದ್ದ
ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು."

ಇನ್ನು ಅಕ್ಕ ಮಾಡಬೇಕಾದುದು ಏನೂ ಉಳಿಯಲಿಲ್ಲ. ಅವಳ ತನು, ಮನ, ಪ್ರಾಣ, ಅರಿವು ಇಷ್ಟೂ ಚೆನ್ನನಲ್ಲಿ ಸ್ವಯವಾಯಿತು.

"ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ?
ಮನ ನಿಮ್ಮ ರೂಪಾದ ಬಳಿಕ ನಾನಾರ ನೆನೆವೆ?
ಪ್ರಾಣ ನಿಮ್ಮ ರೂಪಾದ ಬಳಿಕ ನಾನಾರನಾರಾಧಿಸುವೆ?
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ?
ಚೆನ್ನಮಲ್ಲಿಕಾರ್ಜುನಾ, ನಿಮ್ಮತ್ತ ನೀವಾಗಿ ನಿಮ್ಮಿಂದ ನಿಮ್ಮ ಮರೆದೆ ನಯ್ಯಾ."

ಅಕ್ಕ ಕಲ್ಯಾಣಕ್ಕೆ ಬಂದು ಕಲ್ಯಾಣವನ್ನೇ ಸಾಧಿಸಿದಳು ಇನ್ನು ಅವಳಿಗೆ ಅಲ್ಲಿರುವುದು ಸೂಕ್ತವಲ್ಲವೆನಿಸಿತು. ತನ್ನ ನಲ್ಲನನ್ನು ಏಕಾಂತದಲ್ಲಿ ಸಾಧಿಸುವ ಲಗುಬಗೆಯಿಂದ ಆಕೆ ಕಲ್ಯಾಣವನ್ನೂ ಅಲ್ಲಿ ತನಗೆ ಗುರುಸ್ಥಾನದಲ್ಲಿ ನಿಂತು ಉಪದೇಶಗೈದ ಶರಣ ಸಂದೋಹವನ್ನೂ ಬೀಳ್ಕೊಂಡು ಶ್ರೀ ಶೈಲದ ಕಡೆಗೆ ಬರುತ್ತಾಳೆ. ಹೀಗೆ ಹೊರಡುವಾಗ ಬಸವಾದಿಗಳನ್ನು ಕೃತಜ್ಞತೆಯಿಂದ ಸ್ಮರಿಸುವುದಲ್ಲದೆ ತನ್ನ ಶೀಲಚಾರಿತ್ರ್ಯಗಳಿಂದ ಅವರ ಉಪದೇಶಕ್ಕೆ ತಕ್ಕ ಕೀರ್ತಿಯನ್ನು ಗಳಿಸಿಕೊಡುವೆನೆಂದು ಹೇಳಿ ಹೊರಡುವಳು.

"ಬಸವಣ್ಣ ಮೆಚ್ಚಲು ಒಗೆತನವ ಮಾಡುವೆ,
ಚೆನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ಮಂಡೆಗೆ ಪೂವ ತಹೆನಲ್ಲದೆ ಹುಲ್ಲ ತಾರೆನು,

ಅವಧರಿಸಿ. ನಿಮ್ಮಡಿಗಳೆಲ್ಲರು,
ಮರಳಿ ಬಿಜಯಂಗೈವುದು ಶರಣಾರ್ತಿ."

೫

ನಾವಿನ್ನು ನೋಡುವುದು ಅಕ್ಕನ ಆಧ್ಯಾತ್ಮಿಕ ಜೀವನದ ಕೊನೆಯ ಘಟ್ಟವನ್ನು. ಶ್ರೀಶೈಲದ ಉತ್ತುಂಗ ಶಿಖರವನ್ನೇರುವ ಅಕ್ಕ ತನ್ನ ಆಧ್ಯಾತ್ಮಿಕ ಜೀವನದಲ್ಲೂ ಕಡೆಯ ಹಂತವನ್ನೇರಿ ತನ್ನ ಮುಡಿಯ ಮಾಣಿಕದಂತಹ ಚನ್ನನ ಮಧುರ ಭಾವದ ಲಿಂಗಾಂಗ ಸಾಮರಸ್ಯದ ಭಾವಸಮಾಧಿಯಲ್ಲಿ ಬಯಲಾಗುವ ದೃಶ್ಯ ಮನಮೋಹಕವಾದುದು. ಅಕ್ಕ ಕಲ್ಯಾಣವನ್ನು ಬಿಟ್ಟುಬಂದುದು "ಇಂದ್ರನೀಲ ಗಿರಿಯನೇರಿಕೊಂಡು ಚಂದ್ರಕಾಂತ ಶಿಲೆಯ ಅಪ್ಪಿಕೊಂಡು ಕೊಂಬ ಬಾರಿಸುತ್ತ ಕುಂಭಕುಚದ ಮೇಲೆ ಶಿವನೆ ನಿನ್ನನಪ್ಪಿಕೊಂಡು ನೆನೆವುತ್ತ ಎಂದಿಪ್ಪೆನೊ ?" ಎನ್ನುವ ಈಯೊಂದು ಜೀವನದ ಶಿವಸಾಪೇಕ್ಷತ್ವದ ತೃಷೆ ಆರಲೆಂದು. ಬಹುಶಃ ಅಕ್ಕ ಶ್ರೀಶೈಲದ ಕಡೆಗೆ ಧಾವಿಸಿ ಬರಲು ಅವಳ ಒಡನೊಡನೆಯೇ ವಸಂತ ಮಾಸವೂ ಧಾವಿಸಿ ಬಂದಿರಬೇಕು. ಎಲ್ಲೆಲ್ಲಿ ನೋಡಿದರೆ ಅಲ್ಲಲ್ಲಿ ಕಣ್ ಮನಗಳನ್ನು ಸೆಳೆಯುವ ಮರಗಿಡಗಳೂ, ಹೂ ಬಳ್ಳಿಗಳೂ ಹುಲ್ಲು ಕಾವಣಗಳೂ ಸಿಂಗರಗೊಂಡು ಚನ್ನಮಲ್ಲಿಕಾರ್ಜುನನ ಪೂಜೆಗೆಂದು ಪ್ರಕೃತಿ ಮಾತೆ ಎತ್ತಿದ ಆರತಿಯಂತೆ ಶೋಭಾಯಮಾನವಾಗಿ ಕಾಣುತ್ತಿದ್ದುವು. ದಿವ್ಯವೂ ಭವ್ಯವೂ ಆದ ಸೃಷ್ಟಿ ರಾಸಲೀಲೆಯಲ್ಲಿ ತೊಡಗಿದಂತೆ ಕುಣಿಯುತ್ತಿದ್ದಿತು. ಇಂತಹ ಸುಂದರವಾದ ಸೃಷ್ಟಿಯ ನಡುವೆ ಅಣುರೇಣುತೃಣಕಾಷ್ಠದಲ್ಲಿ ಸಂಪೂರ್ಣನಾದ ಚನ್ನಮಲ್ಲಿಕಾರ್ಜುನನು ಮೈವೆತ್ತು ಬಂದಂತೆ ಅಕ್ಕನಿಗೆ ಭಾಸವಾಯಿತು.

"ವನವೆಲ್ಲ ನೀವೆ, ವನದೊಳಗಣ ದೇವತರುವೆಲ್ಲ ನೀವೆ,
ತರುವಿನೊಳಗಾಡುವ ಖಗಮೃಗವೆಲ್ಲ ನೀವೆ,
ಚನ್ನಮಲ್ಲಿಕಾರ್ಜುನನು ಸರ್ವಭರಿತನಾಗಿ ಎನಗೆ ಮುಖ ದೋರ"

ಎಂದು ಅಕ್ಕನು ಸೃಷ್ಟಿಯ ಚೈತನ್ಯ ಸ್ವರೂಪನಾದ ಪರಮಾತ್ಮ ನನ್ನು ಬೇಡಿದಳು. ಈ ಸೃಷ್ಟಿಯಲ್ಲಿ

"ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯ !
ಕಬ್ಬು ಬಾಳೆ ಹಲಸು ನಾರಿಕೇಳಕ್ಕೆ ಸಿಹಿನೀರನೆರೆದವರಾರಯ್ಯ !
ಕಳವೆಶಾಲಿಗೆ ಓಗರದ ಉದಕವನೆರೆದವರಾರಯ್ಯ !
ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದುದಕವನೆರೆದವರಾರಯ್ಯಾ !

ಎಂಬ ಭಾವ ಅಕ್ಕನ ಮನದಲ್ಲಿ ಗುಡಿಗಟ್ಟಿತು.

ಯಾವ ಮರ ಗಿಡ ಬಳ್ಳಿಯನ್ನು ನೋಡಿದರೂ ಚಿಗುರು ಮೊಗ್ಗು ಹೂವು ಕಾಯಿ ಹಣ್ಣುಗಳಿಂದ ಜಗ್ಗಿನಿಂತು ಪರಮಾತ್ಮನ ಅಮೋಘವಾದ ಸೃಷ್ಟಿ ಶಕ್ತಿಯನ್ನು ಉಗ್ಗಡಿಸುತ್ತಿದ್ದವು. ಜೊತೆಗೆ ಹತ್ತೂಕಡೆಯಿಂದ ಕೋಗಿಲೆ ಗಿಣಿ ತುಂಬಿ ಮೊದಲಾದ ಚಿತ್ರವಿಚಿತ್ರಗಳಾದ ವನ್ಯ ಪಕ್ಷಿಗಳ ಕಲಕಲನಿನಾದ ಈ ಸೃಷ್ಟಿ ಯನ್ನು ಗಾನರೂಪದಲ್ಲಿ ವರ್ಣಿಸಿ ತೋರುವಂತೆ ಭಾಸವಾಯಿತು. ಬಳ್ಳಿಯಂತೆ ಚಿಮ್ಮಿ ಬರುವ ಮಿಂಚು ಬಾಯಿಬಿಟ್ಟು ಮಾತ ನಾಡಿದಂತೆ, ನಯನಗೋಚರವಾದ ಸೃಷ್ಟಿ ಶಬ್ದಗೋಚರವೂ ಆಗಿ ಪರಿಣಮಿಸಿದುದರ ಫಲವಾಗಿ ಅಕ್ಕ ಈ ಸೃಷ್ಟಿ ಸೌಂದರ್ಯದ ರಸಾವೇಶದ ಆನಂದಾನುಭೂತಿಯಲ್ಲಿ ಪರವಶಳಾದಳು. ಮರ ಗಿಡಗಳಲ್ಲಿ, ನದಿನದಗಳಲ್ಲಿ ಖಗ ಮೃಗಗಳಲ್ಲಿ ಆ ಆನಂದ ರಸ ಮೂರ್ತಿಯಾದ ಚನ್ನನನ್ನು ಅರಸಿದಳು.

ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ನೀವು ಕಾಣಿರೆ.
ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ.

ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ,
ಕೊಳನತಡಿಯೊಳಾಡುವ ಹಂಸೆಗಳಿರಾ, ನೀವು ಕಾಣಿರೆ, ನೀವು ಕಾಣಿರೆ,
ಗಿರಿ ಗಹ್ವರದೊಳಾಡುವ ನವಿಲುಗಳಿರಾ, ನೀವು ಕಾಣಿರೆ, ನೀವು ಕಾಣಿರೆ,
ಚನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ."

ಹೀಗೆ ಕೂಗಿ ಕೊರಲೆತ್ತಿ ನೋಡಿದಳು. ಕಣ್ಣಿಗೆ ಶ್ರೀಗಿರಿ ಕಾಣಿಸಿತು. ಅಲ್ಲಿ ;

"ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ,
ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ,
ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪರುಷಮೃಗ,
ಎಡಹುವ ಹರಳುಗಳೆಲ್ಲ ಚಿಂತಾಮಣಿ."

ಏಕೆಂದರೆ ಅದು ಚನ್ನನ ನೆಚ್ಚಿನ ಗಿರಿ.

ಈ ಗಿರಿಯನ್ನು ಹತ್ತಿ ಅಕ್ಕ "ಬೆರೆಸುವರೆ ಬೇಗ ತೋರಾ ಹೊರಹಾಕದಿರಯ್ಯ ! ನಿಮ್ಮಲ್ಲಿ ಸಲೆಸಂದ ತೊತ್ತಾನು" ಎಂದು ಪ್ರಾರ್ಥಿಸಿದಳು. ಪ್ರಾರ್ಥನೆ ಸಾರ್ಥಕವಾಯಿತು.

"ಹೊಳೆವ ಕೆಂಜೆಡೆಗಳ, ಮಣಿಮುಕುಟ, ಒಪ್ಪುವ
ಸುಲಿಪಲ್ಲ, ನಗೆಮೊಗದ ಕಂಗಳ ಕಾಂತಿಯಿಂ ಈರೇಳು
ಭುವನಮಂ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು.
ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡ ಗಂಡರೆಲ್ಲ
ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು
ಜಗದಾದಿ ಶಕ್ತಿಯೊಳು ಬೆರಸಿಯೊಡನಾಡುವ
ಪರಮಗುರು ಚನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು."

ನಿಜವಾಗಿ ಅಕ್ಕ ಚನ್ನನನ್ನು ಕೂಡಿ ಬದುಕಿದಳು. ಚಿರಂಜೀವಿಯಾದಳು. ಅಮೃತ ಪುತ್ರಿಯಾದಳು. ಚನ್ನನ ಈರೇಳು ಭುವನಮಂ ಬೆಳಗುವ ದಿವ್ಯಸ್ವರೂಪದ ಜಗಜ್ಯೋತಿಯಲ್ಲಿ ಅಕ್ಕನ ಆತ್ಮದ ಕಿರುಸೊಡರು ಬೆರೆದುಹೋಯಿತು. ಲಿಂಗಾಂಗ ಸಾಮ

ರಸ್ಯದ ಭಾವನಾಸಮಾಧಿಯಲ್ಲಿ ವಿಲೀನವಾಯಿತು. ಅಕ್ಕ ಲಿಂಗ ಉರಿ ಮುಟ್ಟಿದ ಕರ್ಪೂರ.

"ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಮರಸವೆನ್ನೆ
ಆಯಿತೆನ್ನೆ, ಆಗದೆನ್ನೆ, ನೀನೆನ್ನೆ, ನಾನೆನ್ನೆ, ಚನ್ನಮಲ್ಲಿ
ಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ."

ಉಡುತಡಿಯ ಮಲ್ಲಿಗೆ ಶ್ರೀ ಶೈಲದ ಚನ್ನನ ಅಡಿಗೆ ಸೇರಿತು. ಚನ್ನ 'ಮಲ್ಲಿಕಾರ್ಜುನ'ನಾದ, ಅಕ್ಕ 'ಮಹದೇವಿ'ಯಾದಳು.

## ೩. ವಚನಗಳಲ್ಲಿ ಕಾವ್ಯ, ಮತ, ನೀತಿ

ಈ ಮೇಲೆ ಉದಾಹರಿಸಿದ ವಚನಗಳಿಂದಲೇ ಅಕ್ಕನ ವಾಣಿ ಎಂತಹ ಕಾವ್ಯವಾಣಿ ಎನ್ನುವುದನ್ನು ಯಾರಾದರೂ ಅರಿತು ಕೊಳ್ಳಬಹುದು. ಅವಳ ಜೀವನವೇ ಒಂದು ಕಾವ್ಯ. ಅವಳ ಆತ್ಮವೇ ಒಂದು ಕಾವ್ಯದ ನಾಯಕರತ್ನ. ಆದುದರಿಂದಲೇ ಆ ರತ್ನದ ವರ್ಣಚ್ಛವಿಯಂತೆ ಬಣ್ಣಬಣ್ಣದ ಕಾಂತಿ ಬೀರುತ್ತವೆ ವಚನಗಳು. ಕೇವಲ ಬಣ್ಣದ ಬೆಡಗು ಈ ವಚನದಲ್ಲಿವೆ ಎಂಬು ದಲ್ಲ. ಇವು ರಸವತ್ತಾಗಿಯೂ ಇವೆ. ಅಕ್ಕನವರ ನುಡಿಹಣಿಲು ಮುಟ್ಟಿದಲ್ಲಿ ಮಧುಸುರಿಸುವ ಕೋಲುಜೇನಿನ ಹಣಿಲಿನಂತೆ.

"ಅಳಿಸಂಕುಳವೇ ಮಾಮರವೇ ಬೆಳುದಿಂಗಳೇ ಕೋಗಿಲೆಯೇ
ನಿಮ್ಮ ನಿಮ್ಮನೆಲ್ಲರನು ಒಂದ ಬೇಡುವೆನು
ಚನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೆ."

ಈ ಒಂದು ವಚನ ಸಾಕು ವಿಪ್ರಲಂಭ ಶೃಂಗಾರರಸ, ಕೋಡಿ ಯೊಡೆದ ಕೆರೆಯಂತೆ ಇಲ್ಲಿ ಹೇಗೆ ಹರಿಯುತ್ತಿದೆ ಎನ್ನುವುದಕ್ಕೆ.

"ಚನ್ನಮಲ್ಲಿಕಾರ್ಜುನ ನೀನು ಇರಿದ ಅಲಗು ಒಡಲಲ್ಲಿ
ಮುರಿದು ಹೊರಳುವುದ ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ !"

ಎನ್ನುವ ವಚನದಲ್ಲಿಯೂ ಇದೇ ಕೋಡಿ ಹರಿಯುವ ಉಬ್ಬ ರದ ಮೊರೆತ ಕೇಳಿಬರುತ್ತದೆ.

"ಶಿರಹರಿದು ಬಿದ್ದಡೆ ಪ್ರಾಣನಿಮಗರ್ಪಿತವೆಂಬೆನು."

ಇಂತಹ ಕಡೆಗಳಲ್ಲಿ ಮಾತು ಶಬ್ದ ಬಹಳ ಸುಲಭ; ಆದರೆ ಅವು ಹೇಳುವ ಭಾವ ಅರ್ಥ ಬಹುದೊಡ್ಡದು.

"ಕಿಡಿಕಿಡಿ ಕೆದರಿದಡೆ, ಎನಗೆ ಹಸಿವು ತೃಷೆ ಅಡಗಿತೆಂಬೆನು
ಮುಗಿಲು ಹರಿದು ಬಿದ್ದಡೆ, ಎನಗೆ ಮಜ್ಜನಕ್ಕೆರೆದರೆಂಬೆನು

ಗಿರಿಮೇಲೆ ಬಿದ್ದಡೆ, ಎನಗೆ ಪುಷ್ಪವೆಂಬೆನು
ಚನ್ನಮಲ್ಲಿಕಾರ್ಜುನಯ್ಯ ಶಿರಹರಿದುಬಿದ್ದರೆ ಪ್ರಾಣ
ನಿಮಗರ್ಪಿತವೆಂಬೆನು."

ಈ ಮಾತಿನಲ್ಲಿ ಧೀರವೂ ಗಂಭೀರವೂ ಆದ ಆತ್ಮ ಹೇಗೆ ಕಿಡಿಗರೆಯುತ್ತದೆ, ಮಳೆಗರೆಯುತ್ತದೆ ಎನ್ನುವುದೂ ಸರ್ವಾರ್ಪಣದ ಬಲಿದಾನಕ್ಕೆ ಸಿದ್ಧವಾದ ಜೀವದ ಮನೋಭಾವ ಹೇಗೆ ಹೆಪ್ಪುಗಟ್ಟಿ ನಿಂತಿದೆ ಎನ್ನುವುದೂ ವ್ಯಕ್ತವಾಗುತ್ತದೆ.

'ಊರಸೀರೆಗೆ ಅಗಸ ತದೆಗೊಂಬಂತೆ' 'ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ' 'ಅರಲುಗೊಂಡ ಕೆರೆಗೆ ತೊರೆಬಂದು ಹಾಯ್ದಂತೆ' 'ನೀರಕ್ಷೀರದಂತೆ' 'ಶಿಲೆಯು ಮರೆಯು ಹೇಮದಂತೆ' 'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ' 'ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆದಂತೆ' 'ಕತ್ತಲೆಯ ಪಾಳಯುವ ರವಿ ಹೊಕ್ಕಂತೆ' ಈ ಮೊದಲಾದ ಉಪಮೆಗಳು ಹೇಳುವ ಅರ್ಥವನ್ನು ಪುಷ್ಟೀಕರಿಸಿ ವಿಷಯಗಳನ್ನು ಸುಲಭಗ್ರಾಹ್ಯವಾಗುವಂತೆ ಮಾಡಿವೆ. ಈ ಎಲ್ಲ ಉಪಮೆಗಳೂ ಜೀವಂತ ಉಪಮೆಗಳು. ದಿನದಿನದ ಲೋಕಾನುಭವದಿಂದ ನೇರವಾಗಿ ಸೆಳೆದುಕೊಂಡ ಉಪಮೆಗಳು.

ಉಪಮೆಗಳನ್ನು ಬಳಸಿದಂತೆ ದೃಷ್ಟಾಂತಾಲಂಕಾರವನ್ನು ಬಳಸಿರುವುದು ಈಕೆಯ ವಚನಗಳಲ್ಲಿ ಇನ್ನೊಂದು ಗುಣ. ಲೋಕದಲ್ಲಿ ಹುಟ್ಟಿದವನು ಸಮಾಧಾನಿಯಾಗಿರಬೇಕೆಂದು ಹೇಳುವಾಗ 'ಬೆಟ್ಟದ ಮೇಲೊಂದು ಮನೆಯಮಾಡಿ ಮೃಗಂಗಳಿಗಂಜಿದಡೆಂತಯ್ಯ !' ಎಂದು ಕೊಡುವ ದೃಷ್ಟಾಂತ, ಅನುಭವಿಗಳ ಸಂಗ ಬೇಕೆನ್ನುವಾಗ 'ಮರಮರಮಥನಿಸಿ ಕಿಚ್ಚು

ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು' ಎಂದು ಕೊಡುವ ದೃಷ್ಟಾಂತ, ಚನ್ನಮಲ್ಲಿಕಾರ್ಜುನನನ್ನು ಎಳಸಿದ ಮನ ಬೇರೊಂದಕ್ಕೆ ಎಳಸದು ಎನ್ನುವಾಗ 'ಗಿರಿಯಲಲ್ಲದೆ ಹುಲು ಮೊರಡಿಯಲ್ಲಾಡುವುದೇ ನವಿಲು' ಎನ್ನುವ ದೃಷ್ಟಾಂತಗಳೂ ಇಂತಹ ಇತರ ಸಂದರ್ಭಗಳಲ್ಲಿ ಬರುವ ದೃಷ್ಟಾಂತಗಳೂ ಬಹಂ ಸುಂದರವಾಗಿರುತ್ತವೆ. ಇವುಗಳ ಸೊಗಸು ತಿಳಿಯಲೆಂದು ಇನ್ನೂ ಕೆಲವನ್ನು ಆಯ್ದುಕೊಟ್ಟಿದೆ :

'ಚಂದನವ ಕಡಿದು ಕೊರೆದು ತೇದೊಡೆ ನೋದೆನೆಂದು ಕಂಪ ಬಿಟ್ಟಿತ್ತೆ ?' 'ಹಾಲ ಹಿಡಿದು ಬೆಣ್ಣೆಯನರಸಲುಂಟೆ ?' 'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯಾ !' 'ಬಂಜೆ ಬೇನೆಯನರಿಯಳು. ಬಲತಾಯಿ ಮುದ್ದ ಬಲ್ಲಳೇ ?' 'ಹಣ್ಣ ಮೆದ್ದ ಬಳಿಕ ಆ ಮರವನಾರು ತರಿದರೇನು ?'

ಅಕ್ಕನ ವಚನಗಳು ಉಪಮೆ, ರೂಪಕ, ದೃಷ್ಟಾಂತ ಮೊದಲಾದ ಅಲಂಕಾರಗಳಿಂದ ಮೆರಗು ಪಡೆದಿರುವುದರ ಜೊತೆಗೆ ಅವು ತಮ್ಮದೇ ಆದ ಒಂದು ಬಗೆಯ ಛಂದಸ್ಸಿನ ಲಯಗತಿಗಳಲ್ಲಿ ನಿನದಿಸುತ್ತಿರುವುದರಿಂದ ಕೇಳುವುದಕ್ಕೆ ಕಿವಿಗೆ ಹಿತವಾಗಿಯೂ ಇಂಪಾಗಿಯೂ ಇವೆ. ಬಹುಶಃ ಹಿಂದಣ ಶಿವಶರಣರ ವಚನಗಳು ಎಲ್ಲವೂ ಅಲ್ಲದಿದ್ದರೆ ಕೆಲವಾದರೂ ಒಂದು ವಿಧವಾದ ಛಂದೋರೂಪದಲ್ಲಿಯೇ ಇದ್ದು ಅವುಗಳನ್ನು ಶರಣರು ಹಾಡುತ್ತಿದ್ದರೆಂದೇ ತೋರುತ್ತದೆ. ಹೀಗೆ ಹೇಳಲು ಸಾಕಷ್ಟು ಆಧಾರಗಳಿವೆ. ಇದರ ಮೇಲೆ ಈ ಹೊತ್ತು ಕೂಡ ಕೆಲಮಂದಿ ಗಮಕಿಗಳು ದಾಸರ ಕೀರ್ತನೆಗಳಂತೆ ವಚನಕಾರರ ವಚನಗಳನ್ನೂ ರಾಗ ತಾಳಗಳೊಡನೆ ಹಾಡುವ ಪದ್ಧತಿಯನ್ನು ರೂಢಿಗೆ ತರುತ್ತಿದ್ದಾರೆ.

ಶಿವಶರಣರ ಕಥೆಗಳನ್ನೆಲ್ಲ ರಗಳೆಯ ರೂಪದಲ್ಲಿ ರಚಿಸಿದ ಹರಿಹರ ಕವಿ ವಚನಗಳನ್ನು 'ಗೀತ'ಗಳೆಂದೇ ಕರೆದಿದ್ದಾನೆ. ಮಾತ್ರವಲ್ಲ, ತನ್ನ ರಗಳೆಗಳಲ್ಲಿ ಶಿವಶರಣರ ವಚನಗಳನ್ನೇ ಛಂದಸ್ಸಿಗೆ ತಿರುಗಿಸಿ ಕೊಂಡಿದ್ದಾನೆ. ಉದಾಹರಣೆಗೆ ಅಕ್ಕಮಹಾದೇವಿಯ ರಗಳೆಯಲ್ಲಿ "ಆಗಳಾಗಳಿನ ಶಿವಾನುಭವಕ್ಕೆ ನವಗೀತಮಂ ಪಾಡಿ" "ಗೀತಮಂ ಪಾಡುತುಂ ಪೊರಪಟ್ಟು ನಡೆತಂದು" ಎಂದು ಮುಂತಾಗಿ ಬರೆದಿದ್ದಾನೆ. ಅದೇ ರಗಳೆಯಲ್ಲಿ, ಕೊಟ್ಟಭಾಷೆಯನ್ನು ತಪ್ಪಿದ ಕೌಶಿಕನನ್ನು ಅಕ್ಕ ತ್ಯಜಿಸಿ ಬಂದಮೇಲೂ ಆ ಕಾಮುಕನು ಅವಳನ್ನು ಬಿಡಲಾರದೆ ಮತ್ತೆ ಒಲಿಸಿಕೊಳ್ಳುವ ಆಸೆಯಿಂದ ಶಿವಭಕ್ತರ ಸೋಗನ್ನು ತಾಳಿ ಬಂದ ಪ್ರಸಂಗದಲ್ಲಿ ಅಕ್ಕ

"ಬಿಟ್ಟೆಪೆನೆಂದೊಡಂ ಬಿಡದು ನಿನ್ನಯ ಮಾಯೆ
ಒಟ್ಟಯಿಸಿ ಬಂದೊಡೊಡವಂದಪ್ಪುದೀ ಮಾಯೆ
ಜೋಗಿಗಂ ಜೋಗಿಣಿಯದಾಯ್ತು ನಿನ್ನಯ ಮಾಯೆ
ರಾಗದಿಂ ಸವಣಂಗೆ ಕಂತಿಯಾಯಿತು ಮಾಯೆ
ಗಿರಿಯನೇರಿದೊಡಿರದೆ ಗಿರಿಯನೇರಿತು ಮಾಯೆ
ಪರಿದಡವಿಯಂ ಪೊಕ್ಕೊಡೊಡನೆ ಪೊಕ್ಕುದು ಮಾಯೆ
ಬೆನ್ನಕೈಯಂ ಬಿಡದು ಭಾಪು ಸಂಸಾರವೇ

ಎಂದು ಹುಯ್ಲಿಟ್ಟಂತೆ ಹರಿಹರನು ವರ್ಣಿಸಿದ್ದಾನೆ.

ಅಕ್ಕನವರ ವಚನ ಈ ಸಂದರ್ಭದಲ್ಲಿ "ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ, ಯೋಗಿಗೆ ಯೋಗಿಣಿಯಾಯಿತ್ತು ಮಾಯೆ, ಸವಣಂಗೆ ಸವಣಿಯಾಯಿತ್ತು ಮಾಯೆ....ಕಲ್ಲ ಹೊಕ್ಕರೆ ಕಲ್ಲ ಬರಸಿದೆ ಗಿರಿಯ ಹೊಕ್ಕರೆ ಗಿರಿಯ ಬರಸಿದೆ ಭಾಪು ಸಂಸಾರವೇ ಬೆನ್ನಿಂದ ಬೆನ್ನಹತ್ತಿ ಬಂದೆ" ಎಂಬುದೆ ಆಗಿರಬಾರದೇಕೆ ?

ಇಂಥ ಕಡೆಗಳಲ್ಲೆಲ್ಲಾ ವಚನದ ಭಾಷೆ ಹೇಗೆ ಬಹು ಸುಲಭವಾಗಿ ಕಾವ್ಯದ ಭಾಷೆಯಾಗಿ ಮಾರ್ಪಾಟಾಗಬಹುದು ಎಂಬುದು ಗೊತ್ತಾಗುತ್ತದೆ. ಅಕ್ಕನ ಕಾವ್ಯಮಯವಾದ ವಚನವನ್ನು ಹರಿಹರನು ಛಂಧಸ್ಸಿಗೆ ಬಹು ಸುಲಭವಾಗಿ ತಿರುಗಿಸಿಕೊಂಡುದರಿಂದಲೇ ಈ ಅಂಶ ವ್ಯಕ್ತವಾಗುತ್ತದೆ. ಇದರ ಮೇಲೆ ಅಕ್ಕ ಅವುಗಳನ್ನು ಹಾಡಿನ ರೂಪದಲ್ಲಿಯೇ ಕಟ್ಟಿರಬೇಕು. ಹಲಗೆಯ ದೇವರ ಶೂನ್ಯಸಂಪಾದನೆಯ ಪ್ರತಿಯಲ್ಲಿ ಈ ಮಾತಿಗೆ ನಿದರ್ಶನ ಸಿಕ್ಕುತ್ತದೆ. ಅಕ್ಕನ ಒಂದು ವಚನವನ್ನು ಅಲ್ಲಿ ಹಾಡಿನಂತೆ ಬರೆದಿದೆ.

ರಾಗ ಕಾಂಬೋಧಿ

॥ಪಲ್ಲವಿ॥

ಎಮ್ಮವರೆನ್ನ ಮದುವೆಯ ಮಾಡಿದರು
ಲಿಂಗಕ್ಕೆನ್ನ ಮದುವೆಯ ಮಾಡಿದರು॥
ಪಚ್ಚೆಯ ನೆಲಗಟ್ಟು ಕನಕದ ತೋರಣ
ವಜ್ರದ ಕಂಭ ಮಾಣಿಕದ ಚಪ್ಪರವಿಕ್ಕಿ ಮದುವೆ ॥೧॥

ಬಸವ ಬಂದಿಗಟ್ಟಿ ಸಂಗಯ್ಯ ಮದುವಣಿಗ
ಆನು ಮಂ [ತ್ರೈ]ದೆ ಶರಣರು ದಿಬ್ಬಣಿಗರು ॥೨॥

ಕಂಕಣಕೈದಾರೆಗಟ್ಟಿ ಸ್ಥಿರ ಸೇಸೆಯನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡನಿಗೆನ್ನ
ಮದುವೆಯ ಮಾಡಿದರು ॥೩॥

ಪದಸಹ ವಚನ

ಶ್ರೀಮಾನ್ ಫ.ಗು. ಹಳಕಟ್ಟಿ ಅವರು ಸಂಪಾದಿಸಿದ ಹೊತ್ತಿಗೆಯಲ್ಲಿ ಈ ಹಾಡು ಹೀಗೆ ಅಚ್ಚಾಗಿದೆ.

"ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದಕಂಭ, ಪವಳದ ಚಪ್ಪರವನಿಕ್ಕಿ ಮುತ್ತು ಮಾಣಿಕದ ಮೇಲು ಕಟ್ಟು ಕಟ್ಟಿ.

ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು.
ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ, ಚನ್ನಮಲ್ಲಿಕಾರ್ಜುನ
ನೆಂಬ ಗಂಡಂಗೆನ್ನ ಮದುವೆಯ ಮಾಡಿದರು."

ಈ ಮೇಲಣ ವಿವೇಚನೆಯಿಂದ ಅಕ್ಕನ ವಚನಗಳು ಕಾವ್ಯ ಮಯವಾಗಿವೆ ಎಂಬ ಅಂಶವನ್ನು ಅವು ಮೂಲದಲ್ಲಿ ಛಂದೋ ಬದ್ಧವಾಗಿಯೇ ರಚಿತವಾಗಿದ್ದಿರಬೇಕು ಎನ್ನುವುದರಿಂದಲೂ ಹಾಗಿಲ್ಲದಿದ್ದರೂ ಛಂದಸ್ಸಿಗೆ ಅವುಗಳನ್ನು ತಿರುಗಿಸಿಕೊಳ್ಳುವುದು ಅಷ್ಟೇನೂ ಕಷ್ಟವಲ್ಲ ಎನ್ನುವುದರಿಂದಲೂ ಸಮರ್ಥಿಸಿದ ಹಾಗಾ ಯಿತು. ಪದ್ಯವಾಗಲಿ ಗದ್ಯವಾಗಲಿ ಕಾವ್ಯವಾಗುವುದು ಅದರ ಛಂದೋಬದ್ಧರೂಪದಿಂದ ಅಲ್ಲ ಎನ್ನುವುದೇನೋ ನಿಜ. ರಸ, ಭಾವ, ಧ್ವನಿ ಇವು ಕಾವ್ಯದ ಜೀವಾಳ ಎನ್ನುವುದೂ ಸರಿಯೇ. ಆದರೂ ಕಾವ್ಯಜೀವಾಳವಾದ ರಸ, ಧ್ವನಿಗಳೊಂದಿಗೆ ಕೇಳಿ ದೊಡನೆಯೇ ಕಿವಿಯನ್ನು ಆಕರ್ಷಿಸುವ ಛಂದಸ್ಸಿನ ಲಯಗತಿಯೂ ಸೇರಿದ್ದರೆ ಆ ಕಾವ್ಯ ಇನ್ನೂ ಉತ್ತಮವಾಗುವುದು. ಇಂತಹ ಉತ್ತಮವಾದ ಕಾವ್ಯದ ಸೊಬಗೂ ಕೂಡ ಅಕ್ಕನ ವಚನಗಳಲ್ಲಿ ಕಾಣಬರುತ್ತದೆ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವಂಗಾನೊಲಿದೆನವ್ವ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚಲುವಂಗಾ
ನೊಲಿದೆ ಎಲೆ ಅವ್ವಾ
ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು ||೧||

ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ
ಸಲಗುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ ಬಳಲುಗೆ ಮನ ನಿಮ್ಮಲ್ಲಿ
ಕರಗುಗೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ ||೨||

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ
ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ ||೩||

ಕಳವಳದ ಮನವು ತಲೆಕೆಳಗಾದುದವ್ವ
ಸುಳಿದು ಬೀಸುವ ಗಾಳಿ ಉರಿಯಾಯಿತವ್ವ
ಬೆಳುದಿಂಗಳು ಬಿಸಿಲಾಗಿತ್ತು ಕೆಳದಿ
ಹೊಳಲ ಸುಂಕಿಗನಂತೆ ತೊಳಲುತ್ತಿಹೆನವ್ವಾ ||೪||

ಚಿಲಿಮಿಲಿಯೆಂದೋದುವ ಗಿಳಿಗಳಿರಾ ನೀವು ಕಾಣಿರೆ ನೀವು ಕಾಣಿರೆ
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ ನೀವು ಕಾಣಿರೆ
ಕೊಳನತಡಿಯೊಳಾಡುವ ಹಂಸಗಳಿರಾ ನೀವು ಕಾಣಿರೆ ನೀವು ಕಾಣಿರೆ
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ ನೀವು ಕಾಣಿರೆ
ಚನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ
ನೀವು ಹೇಳಿರೆ ||೫||

ಈ ಉದಾಹರಣೆಗಳ ಜೊತೆಗೆ ಈ ಹಿಂದೆ ಉದಾಹರಿಸಿರುವ ಇನ್ನಿತರ ವಚನಗಳನ್ನೂ ನೋಡಬಹುದು. ವಚನಗಳಲ್ಲಿ ಕಾಣಬರುವ ಸೌಕುಮಾರ್ಯ ಮಾಧುರ್ಯಗಳನ್ನೂ ಅರ್ಥ ಭಾವಗಳನ್ನೂ, ಅವುಗಳಿಗೆ ಹೊಂದಿಕೊಂಡು ಬಂದಿರುವ ಪದಬಂಧ ಪ್ರೌಢಿಮೆಯನ್ನೂ ಶ್ರೋತೃಗಳ ಹೃದಯವನ್ನು ರಸಸ್ಯಂದಿಯನ್ನಾಗಿ ಮಾಡುವ ನಾದಲೀಲೆಯನ್ನೂ ಓದುಗರೇ ಊಹಿಸಿಕೊಳ್ಳಬಹುದು. ಉದಾಹರಣೆಯಲ್ಲಿ ಕಡೆಯದಾಗಿ ಹೇಳಿದ ವಚನವಂತೂ ವಚನ ಸಾಹಿತ್ಯದಲ್ಲೆ—ಏಕೆ ಕನ್ನಡ ಸಾಹಿತ್ಯದಲ್ಲೆ—ಅತ್ಯಮೂಲ್ಯವಾದ ಒಂದು ಕಾವ್ಯ ಭಾಗವೆನ್ನಬಹುದು. ಆಧುನಿಕರ ದೃಷ್ಟಿಯಲ್ಲಿ ಅದೊಂದು ಅತ್ಯುತ್ತಮ ಭಾವಗೀತೆ. ತನ್ನ ಆರಾಧ್ಯ

ಮೂರ್ತಿಯಾದ ಚನ್ನನನ್ನು ಅರಸಿ ಅರಸಿ ಆತನ ವಿರಹದಿಂದ ತೊಳಲಿ ಬಳಲಿ ತಾಳಲಾರದ ಜೀವ ಕಟ್ಟ ಕಡೆಗೊಮ್ಮೆ ಉಸಿರೆಳೆದು ಕೊರಲೆತ್ತಿ ಕರುಳು ಹಿಂಡುವಂತೆ ಕೂಗಿಕೊಳ್ಳುವ ಆರ್ತನಾದ ಆ ವಚನದಲ್ಲಿ ತುಂಬಿ ಪ್ರತಿಧ್ವನಿಕೊಡುತ್ತಿದೆ. ತನ್ನ ಸುತ್ತಲೂ ಚಿಲಿಮಿಲಿ ಎಂದು ಓದುವ, ಸರವೆತ್ತಿ ಪಾಡುವ, ಎರಗಿಬಂದಾಡುವ, ಕೊಳನತಡಿಯೊಳಾಡುವ, ಗಿರಗಹ್ವರದೊಳಗಾಡುವ ಗಿಳಿ, ಕೋಗಿಲೆ, ತುಂಬಿ, ಹಂಸೆ, ನವಿಲು ಹೀಗೆ ಸುಂದರವಾದ ಸೃಷ್ಟಿಯನ್ನು ಸುಂದರತರವನ್ನಾಗಿ ಮಾಡಿದ ಈ ವನ್ಯ ಪಕ್ಷಿಗಳನ್ನು ಸಂಬೋಧಿಸಿ ಅಕ್ಕ ಚನ್ನಮಲ್ಲಿಕಾರ್ಜುನನನ್ನು ನೀವು ಕಾಣಿರೆ ಎಂದು ಕೇಳುತ್ತಾಳೆ. ಅವಳ ಮಾತೆ ಪ್ರತಿಧ್ವನಿಯ ರೂಪದಲ್ಲಿ ಅವಳಿಗೆ ಉತ್ತರವಾಗಿ ಬಂದಿತೋ ಎಂಬಂತೆ ನೀವು ಕಾಣಿರೆ ಎಂದು ಮತ್ತೊಮ್ಮೆ ಕೇಳಿಸುವುದು ಅಥವಾ ಅಕ್ಕನಂತೆಯೇ ಗಿಳಿ ನವಿಲು ಕೋಗಿಲೆಗಳೂ ಚನ್ನನನ್ನು ಅರಸುತ್ತಿದ್ದು ಅಕ್ಕನ ಪ್ರಶ್ನೆಗೆ ನೀವು ಕಾಣಿರೆ ಎಂದು ತಾವೂ ಪ್ರಶ್ನಿಸಿದಂತೆ ಮತ್ತೊಮ್ಮೆ ಕೇಳಿಸುವುದು. ಇಷ್ಟು ಮಾತ್ರವಲ್ಲದೆ, ಸೃಷ್ಟಿಯ ಸಮಸ್ತ ಚರಾಚರ ವಸ್ತುವಿನಲ್ಲಿಯೂ ಪರಮಾತ್ಮನು ಅಂಶರೂಪದಲ್ಲಿ ಅಡಗಿರುವನೆಂದೂ ಆದುದರಿಂದಲೇ ತನ್ನಲ್ಲಿ ಪರಮಾತ್ಮನನ್ನು ಕಂಡುಕೊಂಡ ಅನುಭಾವಿ ಇತರ ವಸ್ತುಗಳಲ್ಲೂ ಪರಮಾತ್ಮನನ್ನು ಕಾಣುವ ಸಮರಸ ಭಾವದಲ್ಲಿ ತಲ್ಲೀನನಾಗುವನೆಂದೂ ಆದುದರಿಂದಲೇ ಅಕ್ಕನಂತಹ ಅನುಭಾವಿ ಈ ಗಿಳಿ ಕೋಗಿಲೆಗಳನ್ನು ಪರಮಾತ್ಮನನ್ನು ನೀವು ಕಾಣಿರೆ, ನೀವು ಕಾಣಿರೆ ಎಂದು ಕಾತರಳಾಗಿ ನುಡಿಸಿದಳೆಂದೂ ಇಟ್ಟುಕೊಳ್ಳಬಹುದು. ಇಲ್ಲಿ ಅರ್ಥ ಭಾವ ಎಷ್ಟು ಉದಾತ್ತವಾಗಿವೆಯೋ ಮಾತು ರೀತಿ ಅಷ್ಟು ಸುಲಭವಾಗಿರುವುದೇ ಒಂದು ವಿಶೇಷ.

ಹೃದಯದಲ್ಲಿ ನಿಜವಾದ ರಸಾವೇಶವುಂಟಾದಾಗ ಭಾವ ಹೀಗೆ ಶಬ್ದಮಯವಾಗಿ ನಾದಮಯವಾಗಿ ಛಂದೋಬದ್ಧವಾಗಿ ಹೊರ ಹೊಮ್ಮುತ್ತದೆ. ವೀಣೆಯಿಂದ ವಾಣಿ, ಬಳ್ಳಿಯಿಂದ ಹೂ, ಮುಗಿಲಿನಿಂದ ಮಿಂಚು, ಹೊಮ್ಮುವಂತೆ.

ಅಕ್ಕನ ಈ ವಚನವನ್ನು ಓದಿದಾಗಲೆಲ್ಲಾ ಅಭಿನವ ಪಂಪ ನೆಂದು ಹೆಸರು ಪಡೆದ ನಾಗಚಂದ್ರ ಕವಿಯ ಪದ್ಯವೊಂದು ಜ್ಞಾಪಕಕ್ಕೆ ಬರುತ್ತದೆ. ಆತ ಬರೆದ ರಾಮಾಯಣ ಕಾವ್ಯದಲ್ಲಿ ಸೀತಾಹರಣದ ಕತೆಯನ್ನು ಹೇಳುವಾಗ ರಾವಣನಿಂದ ಅಪಹೃತ ಳಾದ ಸೀತೆಯನ್ನು ಕುರಿತು ರಾಮಚಂದ್ರನು ಸುತ್ತಣ ಅರಣ್ಯ ಪ್ರದೇಶದಲ್ಲೆಲ್ಲ ಹುಡುಕಿ ವೈದೇಹಿಯನ್ನು ಆ ವನಾಂತರದಲ್ಲಿ ಎಲ್ಲಿಯೂ ಕಾಣದೆ ಇದ್ದಾಗ

> ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ
> ತಳಿರೇ ತಾವರೆಯೋ ಮದಾಳಿಕುಲಮೋ ಕರ್ಣೆಯ್ದಿಲೋ ಮತ್ತಕೋ
> ಕಿಳಮೋ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ
> ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ

ಎಂದು ಕಣ್ಣಿಗೆ ಕಂಡ ಪ್ರಕೃತಿಯ ಎಲ್ಲ ಸ್ಥಾವರ ಜಂಗಮ ಸತ್ವ ಗಳಿಗೂ ಮೊರೆಯಿಟ್ಟನೆಂದು ನಾಗಚಂದ್ರನು ವರ್ಣಿಸಿದ್ದಾನೆ. ಈ ಎರಡು ಕಾವ್ಯಭಾಗಗಳನ್ನು ಹೋಲಿಸಿ ನೋಡಿದರೆ ವೈದೃಶ್ಯಕ್ಕಿಂತ ಸಾದೃಶ್ಯವೇ ಹೆಚ್ಚು ಮನವರಿಕೆಯಾಗುತ್ತದೆ. ಸಂದರ್ಭ ಸನ್ನಿವೇಶಗಳೂ ವರ್ಣನೆ ವಿವರಣೆಗಳೂ ಕವಿ ಹೃದಯದ ಮಧುರಭಾವವನ್ನೇ ವ್ಯಕ್ತಪಡಿಸುತ್ತವೆ. ಈ ಎರಡ ರಲ್ಲೂ ಕರುಣೆ ಸೋನೆ ಮಳೆಗರೆಯುತ್ತಿದೆ.

ಅಕ್ಕನ ವಚನಗಳಲ್ಲಿ ಭಾವೋತ್ಕರ್ಷವಿದೆ ; ಅರ್ಥ ಗೌರವವಿದೆ ; ಮಧುರ ಪದಬಂಧವಿದೆ ; ಆಲಂಕಾರಿಕ ಪರಿಭಾಷೆ ಇದೆ.

ಒಂದೇ ಮಾತಿನಲ್ಲಿ ಹೇಳುವುದಾದರೆ ಉತ್ತಮ ಕವಿ ಜೀವನದ ಎಲ್ಲ ಸಂಸ್ಕಾರವೂ ಹೃದಯದ ಎಲ್ಲ ರಸಾನುಭವವೂ ಕಂಡು ಬರುತ್ತಿವೆ. ಕನ್ನಡದ ಶಾರದೆ ಅವಳ ನಾಲಗೆಯಲ್ಲಿ ನೆಲಸಿ ಬಿಡಿ ಕವನಗಳಂತಿರುವ ವಚನ ಮುಕ್ತಕಗಳನ್ನು ಅವಳಿಂದ ಹಾಡಿ ಸಿದ್ದಾಳೆ.

ಅಕ್ಕನ ವಚನಗಳಲ್ಲಿ ನೀತಿಗೆ ಮಹತ್ವ ಸ್ಥಾನವಿಲ್ಲವೆಂದರೆ ಬಹುಶಃ ತಪ್ಪಾಗಲಾರದು. ಏಕೆಂದರೆ ಅಕ್ಕ ಬಸವ, ಚನ್ನ ಬಸವ, ಅಲ್ಲಮ, ಸಿದ್ಧರಾಮಾದಿಗಳಂತೆ ವೀರಶೈವಮತ ಧರ್ಮವನ್ನು ಜನಕ್ಕೆ ಬೋಧೆ ಮಾಡುವುದನ್ನೂ ಆ ಸಮಾಜದ ಲೋಪದೋಷಗಳನ್ನು ತಿದ್ದಿ ಜನರನ್ನು ಸತ್ಪುರುಷರನ್ನಾಗಿ ಮಾಡುವುದನ್ನೂ ತಮ್ಮ ಜೀವನದ ಘನೋದ್ದೇಶವನ್ನಾಗಿ ಇಟ್ಟುಕೊಂಡವರಲ್ಲ. ಏನಿದ್ದರೂ ಎಂತಿದ್ದರೂ ಅಕ್ಕನ ಜೀವನದ ಗುರಿ, ಏಕಾಂತದಲ್ಲಿ ತನ್ನ ಪ್ರೀತಿಯ ಚನ್ನಮಲ್ಲಿಕಾರ್ಜುನನನ್ನು ನಿರ್ಹೇತುಕವಾದ ನಿಶ್ಚಲ ಭಕ್ತಿಯಿಂದ ಸಾಧಿಸಿ ಕೃತಕೃತ್ಯತೆ ಯನ್ನು ಪಡೆಯುವುದೇ ಆಗಿದ್ದಿತು. ಅವಳೊಬ್ಬ ಹಿರಿಯ ಅನುಭಾವಿಯಾಗಿ ಆಧ್ಯಾತ್ಮಿಕ ವ್ಯಕ್ತಿಯಾಗಿ ಬಾಳಿದವಳು; ಮತಪ್ರವರ್ತಕಳಾಗಿ ಪ್ರಚಾರಕಳಾಗಿ ಬಾಳಿದವಳಲ್ಲ. ಆದುದ ರಿಂದಲೇ ಅವಳ ವಚನಗಳಲ್ಲಿ ಅತಿಗಹನವೂ ಜಟಿಲವೂ ಆದ ಮತ ಧರ್ಮ ತತ್ವಗಳನ್ನು ಕುರಿತ ಉಪದೇಶಗಳಾಗಲಿ, ಭಕ್ತಿ ಜ್ಞಾನ ವೈರಾಗ್ಯಗಳನ್ನು ಕುರಿತ ಬೋಧೆಗಳಾಗಲಿ ಕಂಡುಬರುವು ದಿಲ್ಲ. ಒಂದು ವೇಳೆ ಕಂಡುಬಂದರೂ ಇವು ಬರುವ ಸನ್ನಿವೇಶ ಅಕ್ಕನ ಸತಿಪತಿ ಭಾವದ ಪಾರಮಾರ್ಥಿಕ ಶೃಂಗಾರದ ಪ್ರಪಂಚ ದಲ್ಲಿಯಾದುದರಿಂದ ಅಲ್ಲಿ ಇವು ನೀರಸವಾಗುವುದಿಲ್ಲ. ತಮ್ಮ ಆಧ್ಯಾತ್ಮಿಕ ಅನುಭವಗಳನ್ನು ವಿವರಿಸುವಾಗ ಅಕ್ಕನವರು ಅನಿ

ವಾರ್ಯವಾಗಿ ಆದರೆ ಆಕೃತಕವಾಗಿ ಎಷ್ಟು ಬೇಕೋ ಅಷ್ಟನ್ನು ಮಾತ್ರ ಮತಧರ್ಮಗಳ ಮಾತಾಗಿ ಹೇಳಿದ್ದಾರೆ.

ಎಲ್ಲ ಮತಬೋಧಕರೂ ತತ್ತ್ವೋಪದೇಶಕರೂ ಅಹಿಂಸೆಯನ್ನು ಕುರಿತು ಜನಕ್ಕೆ ಉಪದೇಶ ಮಾಡಿದಂತೆ ಅಕ್ಕನೂ ತನ್ನದೊಂದು ವಚನದಲ್ಲಿ ಈ ತತ್ತ್ವವನ್ನು ಬಹು ಸುಂದರವಾಗಿ ಪ್ರತಿಪಾದಿಸಿದ್ದಾಳೆ.

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ,
ಹಲವು ಪ್ರಾಣಿಯ ಕೊಂದು ನಲಿನಲಿದಾಡುವ.
ತನ್ನ ಮನೆಯಲ್ಲೊಂದು ಶಿಶು ಸತ್ತಡೆ
ಅದಕ್ಕೆ ಮರುಗುವಂತೆ ಅವಕೇಕೆ ಮರುಗನು?
ಜಾಲಗಾರನ ದುಃಖ ಜಗಕೆಲ್ಲ ನಗೆಗೆಡೆ.
ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನ
ಭಕ್ತನಾಗಿರ್ದು ಜೀವಹಿಂಸೆಯ ಮಾಡುವ
ಮಾದಿಗರನೇನೆಂಬೆನಯ್ಯ.

ನಿರ್ಮಲವಾದ ಮನಸ್ಸಿನಿಂದ ಭಗವಂತನನ್ನು ಭಕ್ತನು ಅನುಸಂಧಾನ ಮಾಡಬೇಕೆಂಬುದನ್ನು ಈ ಕೆಳಗಣ ವಚನದಿಂದ ಅರಿತುಕೊಳ್ಳಬಹುದು.

ಕಡೆಗೆ ಮಾಡಿದ ಭಕ್ತಿ ದೃಢವಿಲ್ಲದಾಳುತನ
ಮೃಡನೊಲಿಯ ಹೇಳಿದರೆ ಎಂತೊಲಿವನಯ್ಯ
ಮಾಡಲಾಗದು. ಅಳಿಮನವ ಮಾಡಿದೊಡೆ
ಮನದೊಡೆಯ ಬಲ್ಲನೈಸೆ.

ಪುರಂದರಾದಿ ದಾಸವರೇಣ್ಯರು ಹೊಲೆಯನಾರು ಎನ್ನುವ ಪ್ರಶ್ನೆಗೆ "ಜಾತಿಯಿಂದಲ್ಲ ನೀತಿಯಿಂದ ಹೊಲೆಯ" ಎಂದು ಉತ್ತರವಿತ್ತಂತೆ ಅಕ್ಕನವರಾದರೂ ಭವಿ ಯಾರು ಎನ್ನುವ

ಪ್ರಶ್ನೆಗೆ ಅರಿಷಡ್ವರ್ಗಾದಿಗಳೇ ಭವಿಗಳು ; ಅವುಗಳನ್ನು ಕಳೆದವರೆ ಶರಣರು ಎಂದು ಹೇಳಿದ್ದಾರೆ.

ಶೀಲ ಶೀಲವೆಂತೆಂಬಿರಯ್ಯ
ಶೀಲದ ನೆಲೆಯ ಬಲ್ಲರೆ ಹೇಳಿರೊ
ಅರಿಯದಿರ್ದೊಡೆ ಕೇಳಿರೊ
ಕಾಮವೊಂದು ಭವಿ ಕ್ರೋಧ ಎರಡನೆಯ ಭವಿ
ಲೋಭ ಮೂರನೆಯ ಭವಿ ಮೋಹ ನಾಲ್ಕನೆಯ ಭವಿ
ಮದ ಐದನೆಯ ಭವಿ ಮತ್ಸರ ಆರನೆಯ ಭವಿ
ಆಮಿಷ ಏಳನೆಯ ಭವಿ. ಇಂತೀ ಏಳು ಭವಿಗಳ
ತಮ್ಮೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ ಭವಿ ಎಂಬರು.
ಹುಸಿ ಎಂಬುದೇ ಹೊಲೆ. ಶಿವಭಕ್ತಂಗೆ ಹುಸಿಯೆಂಬುದುಂಟೆ?
ಅಯ್ಯಾ ಹುಸಿಯನಾಡಿ ಲಿಂಗವ ಪೂಜಿಸಿದಡೆ
ಹೊಳ್ಳ ಬಿತ್ತಿ ಫಲವನರಸುವಂತೆ ಕಾಣಾ ಚನ್ನಮಲ್ಲಿಕಾರ್ಜುನಾ.

ಮನಸ್ಸು ನಿರ್ಮಲವಿಲ್ಲದಿದ್ದಾಗ ತೀರ್ಥಕ್ಷೇತ್ರಗಳನ್ನು ಬಳಸಿ ಬರುವುದು ವ್ಯರ್ಥವೆಂದೂ ಏಕೋಭಾವದಿಂದ ಕರಸ್ಥಲದ ಇಷ್ಟ ಲಿಂಗವೊಂದನ್ನೇ ಪೂಜಿಸಿ ಮುಕ್ತಿ ಪಡೆಯಬಹುದೆಂದೂ ಅಕ್ಕ ಹೇಳಿದ್ದಾಳೆ.

ಹಾಲಹಿಡಿದು ಬೆಣ್ಣೆಯನರಸಲುಂಟೆ?
ಲಿಂಗವ ಹಿಡಿದು ಪುಣ್ಯತೀರ್ಥಕ್ಕೆ ಹೋಗಲುಂಟೆ?
ಲಿಂಗದ ಪಾದತೀರ್ಥ ಪ್ರಸಾದವ ಕೊಂಡು
ಅನ್ಯಬೋಧೆ ಅನ್ಯ ಶಾಸ್ತ್ರಕ್ಕೆ ಹಾರೈಸಲೇತಕ್ಕೆ
ಗುರುಕೊಟ್ಟ ಲಿಂಗದಲ್ಲಿಯೇ ಎಲ್ಲ ತೀರ್ಥಗಳು
ಎಲ್ಲ ಕ್ಷೇತ್ರಂಗಳು ಇಹವೆಂದು ಭಾವಿಸಿ ಮುಕ್ತರಪ್ಪುದಯ್ಯ
ಇಂತಲ್ಲದೆ ಗುರು ಕೊಟ್ಟ ಲಿಂಗವ ಕಿರಿದು ಮಾಡಿ
ತೀರ್ಥಲಿಂಗವ ಹಿರಿದುಮಾಡಿ ಹೋದಾತಂಗೆ
ಅಘೋರ ನರಕ ತಪ್ಪದು ಕಾಣಾ ಚನ್ನಮಲ್ಲಿಕಾರ್ಜುನಾ.

ಶಿವಭಕ್ತನಾದವನು ಸಜ್ಜನರಾದ ಶಿವಶರಣರ ಸಂಗ ಸಹವಾಸದಲ್ಲಿ ನಿರತನಾಗಿರಬೇಕೆಂಬುದನ್ನು ಅಕ್ಕ

ಅರಿಯದವರೊಡನೆ ಸಂಗವ ಮಾಡಿದರೆ
ಕಲ್ಲುಹೊಯ್ದು ಕಿಡಿಯ ತೆಗೆದುಕೊಂಬಂತೆ
ಬಲ್ಲವರೊಡನೆ ಸಂಗವಮಾಡಿದರೆ
ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ
ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರ ಸಂಗ
ಕರ್ಪೂರ ಗಿರಿಯ ಉರಿ ಕೊಂಡಂತೆ

ಎಂದು ಬಹುಮನೋಜ್ಞವಾಗಿ ವಿವರಿಸಿದ್ದಾಳೆ.

ಎಲ್ಲ ವಚನಕಾರರಂತೆ ಅಕ್ಕನೂ ಸಂಸಾರನಿರಸನವನ್ನೂ ಮಾಯಾಮದ ಭಂಗವನ್ನೂ ತನ್ನ ವಚನಗಳಲ್ಲಿ ಮೇಲಿಂದ ಮೇಲೆ ನಿರೂಪಿಸಿದ್ದಾಳೆ. 'ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯಾ' 'ಸಂಸಾರವೆಂಬ ಹಗೆಯಯ್ಯಾ ತಂದೆ' 'ಮಾಯದ ಮದ' 'ಕಾಯದ ಕತ್ತಲೆ' 'ಜೀವದ ಜಂಜಡ' 'ಸಂಸಾರ ನಿಸ್ಸಾರ' 'ಬಿಟ್ಟೆನೆಂದರೆ ಬಿಡದೀ 'ಮಾಯೆ ಬಿಡದಿದ್ದರೆ ಬೆಂಬತ್ತಿತ್ತು ಮಾಯೆ' 'ಹರಿಯ ನುಂಗಿತ್ತು ಮಾಯೆ, ಅಜನ ನುಂಗಿತ್ತು ಮಾಯೆ ಇಂದ್ರನ ನುಂಗಿತ್ತು ಮಾಯೆ ಚಂದ್ರನ ನುಂಗಿತ್ತು ಮಾಯೆ' ಈ ಎಲ್ಲ ಮಾತುಗಳಿಂದ ಅಕ್ಕ ಸಂಸಾರದ ಸುಖವನ್ನು ಕ್ಷಣ ಭಂಗುರವೆಂದೂ ನಶ್ವರವೆಂದೂ ದುಃಖಮೂಲವೆಂದೂ ಇದಕ್ಕೆ ಕಾರಣ ಈ ಸಂಸಾರ ಮಾಯಾ ಬದ್ಧವಾದುದೆಂದೂ ಲೋಭ ಮೋಹ ಮದ ಮತ್ಸರಾದಿಗಳಿಂದ ಭ್ರಾಂತ್ಯುತ್ಪಾದಕವಾದುದೆಂದೂ ಹೇಳಿದ್ದಾಳೆ. ಆದುದರಿಂದಲೇ ಜನ್ಮಗಳಲ್ಲೆಲ್ಲಾ ಶ್ರೇಷ್ಠವಾದ ನರ ಜನ್ಮದಲ್ಲಿ ಪುರುಷಾರ್ಥಗಳಲ್ಲೆಲ್ಲಾ ಶ್ರೇಷ್ಠವಾದ ಮೋಕ್ಷವನ್ನು ಮಾನವನು ಗಳಿಸಿಕೊಳ್ಳಬೇಕೆಂದು ಅಕ್ಕ ಸಾರಿ ಹೇಳಿದಳು.

ವೇದಶಾಸ್ತ್ರಪುರಾಣಾಗಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ
ನುಚ್ಚು ತೌಡು ಕಾಣಿಭೋ! ಇವ ಕುಟ್ಟಲೇಕೆ?
ಅತ್ತಲಿತ್ತ ಹರಿವ ಮನಸವ ಶಿರವನರಿವಡೆ
ಬಚ್ಚಬರಿಯ ಬಯಲು ಚನ್ನಮಲ್ಲಿಕಾರ್ಜುನಾ

ಈ ವಚನದಲ್ಲಿ ಅವಳು ತನ್ನ ಜೀವನದ ಧ್ಯೇಯವನ್ನೇ ಮುಂಡಿಸಿದಂತಿದೆ. ಮೊದಲೇ ಹೇಳಿದಂತೆ ಅಕ್ಕ ಒಬ್ಬ ಆಧ್ಯಾತ್ಮಿಕ ವ್ಯಕ್ತಿ. ಆಕೆ ತನ್ನ ಅನುಭವಕ್ಕೆ ಬಂದುದನ್ನೆ, ತನ್ನ ಹೃದಯದಲ್ಲಿ ತಾನೂ ಸಾಕ್ಷಾತ್ಕರಿಸಿಕೊಂಡುದನ್ನೆ ಜನಕ್ಕೆ ಸತ್ಯವೆಂದು ಸಾರಿದಳು. ಮತಧರ್ಮಗಳ ಸೀಮೆಯಲ್ಲಿ ಇದೇ ಚರಮವಾಕ್ಯ. ಯಾವುದು ಅನುಭವವೇದ್ಯವೋ ಯಾವುದು ಹೃದಯಗೋಚರವೊ ಅದೇ ಸತ್ಯ. ವೇದ, ಶಾಸ್ತ್ರ, ಪುರಾಣ, ಆಗಮಾದಿಗಳಲ್ಲಿ ಹೇಳಿದ ಮಾತು ತನ್ನ ಜೀವನದಲ್ಲಿ ಅನುಭವಕ್ಕೆ ಬಂದಾಗ ಮಾತ್ರ ಸತ್ಯ. ಅನುಭವಕ್ಕೆ ಬಾರದ ಬರಿಯ ಪುಸ್ತಕದ ಮಾತಾದರೆ ಅದು ಅಕ್ಕ ಅಂದಂತೆ ಕೊಟ್ಟಣವ ಕುಟ್ಟಿದಂತೆಯೆ. ಹೃದಯದಲ್ಲಿ ಆತ್ಮ ಸಾಕ್ಷಾತ್ಕಾರವನ್ನು ಪಡೆದು ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿಸಲು ಮನಸ್ಸನ್ನು ಏಕಾಗ್ರದಲ್ಲಿ ನಿಲ್ಲಿಸಿದರೆ ಸಾಕು. ಅಂತಹ ನಿಶ್ಚಲ ಸುಸ್ಥಿರ ನಿಷ್ಠೆ ಆವಶ್ಯಕ. ಆ ಧೀರ ಸಂಯಮವನ್ನೆ ಅಕ್ಕ ತನ್ನ ಜೀವನದ ಸಂದೇಶವೆಂಬಂತೆ ಜನಕ್ಕೆ ಉಸುರಿ ಹೋಗಿದ್ದಾಳೆ.

ಹೇಳುವ ವಿಷಯದ ಭಾವ ತೀವ್ರವಾದಾಗ, ಕಲ್ಪನೆ ಉಜ್ವಲವಾದಾಗ ಕಾದಹಾಲು ಕೆನೆಗಟ್ಟುವಂತೆ ಅನುಭವ ಕೆನೆಗಟ್ಟಿ ನಿಲ್ಲುವ ಕಾವ್ಯ, ಮತ, ತತ್ವ ಇವುಗಳ ತ್ರಿವೇಣೀ ಸಂಗಮವೆ ಈ ವಚನಗಳಲ್ಲಿ ಆದಂತೆ ಕಂಡುಬರುತ್ತದೆ. ತೋರಿಕೆಗೆ ಕಾಣುವ ಮರಳ ರಾಶಿಯ ತಳದಲ್ಲಿ ನಿರ್ಮಲೋದಕದ ಗಂಗೆ ಇರುವಂತೆ, ಈ

ವಚನದಲ್ಲಿ ತೋರಿಕೆಗೆ ಕಾಣುವ ಮತತತ್ವಗಳ ಮರಳ ಮರೆಯಲ್ಲಿ ಕಾವ್ಯರಸ ಗಂಗೆ ಹರಿಯುತ್ತದೆ. ತಲಪರಿಗೆಯ ಪಾತ್ರದಲ್ಲಿ ತೋರಿಕೆಯ ಮರಳನ್ನು ತೋಡಿದ ಮಾತ್ರಕ್ಕೆ ನೀರು ಹೊರ ಚಿಮ್ಮುವಂತೆ ಇಲ್ಲಿಯಾದರೂ ತೋರಿಕೆಯ ಮತತತ್ವದ ಮರಳು ಓರೆಯಾದ ಒಡನೆಯೇ ಈ ಕಾವ್ಯರಸ ಗಂಗೆಯ ನಿರ್ಮಲ ನಿರ್ಝರ ಉಕ್ಕಿ ಬರುತ್ತದೆ.

ಕವಿ, ಹುಚ್ಚ, ಪ್ರೇಯಸಿ ಈ ಮೂವರೂ ಒಂದೇ ವಿಧವಾದ ರಾಗಸಂಸ್ಕಾರ ಉಳ್ಳವರು ಎನ್ನುವ ಮತವಿದೆ. ಅಕ್ಕಮಹ ದೇವಿಯಲ್ಲಿ ಈ ಮೂವರ ಮಹಿಮೆಯನ್ನೂ ಕಾಣಬಹುದು. ಆಕೆ ಕವಿ; ಈ ಕವಿತೆ ವೀರಶೈವ ಮತಧರ್ಮಗಳ ಸ್ಫೂರ್ತಿಯಿಂದ ಉಕ್ಕಿದ ಕವಿತೆ. ಆಕೆ ಹುಚ್ಚಿ, ಈ ಹುಚ್ಚು ಆಧ್ಯಾತ್ಮದ ರೀತಿಯಲ್ಲಿ ಮಾತ್ರ, ಆಕೆ ಪ್ರೇಯಸಿ, ಈ ಪ್ರೇಮ ಪಾರಲೌಕಿಕ ಶೃಂಗಾರದ ರೀತಿಯಲ್ಲಿ ಮಾತ್ರ.

ಇಲ್ಲಿ ಕಾವ್ಯ ಅನುಭಾವ ಪ್ರೇಮ ಈ ಮೂರೂ ಮುಪ್ಪುರಿ ಗೊಂಡಿವೆ. ಒಂದರಿಂದ ಒಂದನ್ನು ಬೇರೆ ನೋಡುವುದಕ್ಕಿಂತ ಮೂರನ್ನೂ ಒಟ್ಟಿಗೆ ನೋಡುವುದೇ ಲೇಸು.

## ೪. ಸಮಾಪ್ತಿ

ಅಕ್ಕಮಹಾದೇವಿ ಒಂದು ಜೀವ, ಒಂದು ದೇಹ ಎಂದು ಭಾವಿಸಿದರೆ ಅದು ನಮ್ಮ ಸಣ್ಣ ಭಾವನೆಯಾಗುತ್ತದೆ. ಅನುಭವಿಗಳ ದೊಡ್ಡ ಭಾವನೆಯಲ್ಲಿ ಹೇಳುವುದಾದರೆ ಆ ಜೀವ ಕೇವಲ ಜೀವವಲ್ಲ, ಜ್ಯೋತಿ ಎನ್ನಬೇಕು. ಆ ದೇಹ ಕೇವಲ ದೇಹವಲ್ಲ, ಹಣತೆ ಎನ್ನಬೇಕು. ದೇಹದ ಹಣತೆಯಲ್ಲಿ ಜೀವನದ ಜ್ಯೋತಿ ಉರಿದು ಅಧ್ಯಾತ್ಮದ ಬೆಳಕಿನಿಂದ ತಾನೂ ಬೆಳಗಿ ಇತರರಿಗೂ ಬೆಳಕಾಗಿ ಕೊನೆಗೆ ಜಗಜ್ಯೋತಿಯಲ್ಲಿ ಐಕ್ಯವಾದ ಜೀವಪ್ರಭೆ ಅಕ್ಕನದು. ಅದು ಸ್ವಯಂಪ್ರಭೆ. ಶ್ರೀಶೈಲದ ಗಿರಿಗಹ್ವರಗಳನ್ನು ಬೆಳಗಿದ ಆ ಸ್ವಯಂಪ್ರಭೆ ಇಂದು ಮತ್ತೆ ಕಾಣಿಸಿಕೊಳ್ಳಲಿ. ಅಂಧತಮಸ್ಸಿನ ಅಸೂರ್ಯ ಲೋಕದಲ್ಲಿ ನರಳುತ್ತಿರುವ ಕನ್ನಡಿಗರ ಹೃದಯ ಗಹ್ವರಗಳನ್ನು ಬೆಳಗಲಿ.

ಬಸವನಂತಹ ಅಣ್ಣ, ಮಹದೇವಿಯಂತಹ ಅಕ್ಕ, ಅವರ ಸಮಕಾಲಿಕ ವ್ಯಕ್ತಿಗಳಿಗೆ ನಿಜವಾದ ಅಣ್ಣ ಅಕ್ಕಂದಿರಾಗಿ ಬಾಳಿದರು. ಇವರ ಬಾಳುವೆಯ ಬೆಳಕಿನಲ್ಲಿ ಅಂದಿನ ತಮ್ಮ ತಂಗಿಯರು ತಮ್ಮ ದಾರಿಯನ್ನು ತಾವು ಕಂಡುಕೊಂಡರು. ಈ ಹೊತ್ತು ಧರ್ಮ, ಮತ, ತತ್ವ, ನೀತಿ, ಆಧ್ಯಾತ್ಮಿಕ ಅನುಭಾವ ಇವುಗಳ ಪುನರ್ಯೋಜನೆಯಲ್ಲಿ ದಾರಿಗೆಟ್ಟು, ಕನ್ನಡಜನ ಮತ್ತಿಂತಹ ಅಣ್ಣ ಅಕ್ಕಂದಿರ ಹುಟ್ಟಿಗಾಗಿ ಕಾದಿದೆ. ಇವರ ಹುಟ್ಟು ಸಿದ್ಧಿಸಿ ತಪಸ್ಸು ಫಲಿಸಿ ನಮ್ಮ ನಾಡುನುಡಿಗಳನ್ನು ಇವರು ಮತ್ತೆ ಬೆಳಗುವಂತಾಗಲಿ. ಹೆರರ ನಾಡು ನುಡಿಗಳ ಮೇಲೂ ಈ ಬೆಳಕು ಬೀಳುವಂತಾಗಲಿ.

ಕೆ.ಸಂ. ೨೮೫೩೪—ಎಂ.ಯು.ಪಿ.ಎಂ.—೧೧,೦೦೦ ಪ್ರತಿಗಳು—೧೫-೨-೮೭

# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಪಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ

೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ.ಪಿ. ಕೃಷ್ಣಕುಮಾರ್